# ದೀಪ ಧ್ವನಿ

ಪ್ರಧಾನ ಸಂಪಾದಕರು

**ಡಾ। ಜಿ. ಎಸ್. ಶಿವರುದ್ರಪ್ಪ**

ಸಂಪಾದಕರು

**ಡಾ। ಶ್ರೀರಾಮ ಭಟ್ಟ**
**ಮಾಹೆರ್ ಮನ್ಸೂರ್**

ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಮುನ್ನುಡಿ

ನಮ್ಮ ಇಂದಿನ ಬದುಕು ಈಗ ಇರುವುದಕ್ಕಿಂತ ಇನ್ನಷ್ಟು ಸುಂದರವಾಗಿ, ಸುಖವಾಗಿ, ವೈಚಾರಿಕವಾಗಿ ರೂಪುಗೊಳ್ಳಬೇಕು ಎನ್ನುವುದು ಎಲ್ಲ ಪ್ರಜ್ಞಾವಂತರ ಆಶಯವಾಗಿದೆ. ಆದರೆ ಅನೇಕ ಕಾರಣಗಳಿಂದ ದಿನದಿಂದ ದಿನಕ್ಕೆ ಈ ನಮ್ಮ ಬದುಕು ಈ ಆಶಯಕ್ಕೆ ವಿರುದ್ಧವಾದ ರೀತಿಯಲ್ಲಿ ಕುರೂಪವೂ ಅಸ್ವಸ್ಥವೂ ಅವೈಚಾರಿಕವೂ ಆಗಿ ರೂಪುಗೊಳ್ಳುತ್ತಿದೆಯಲ್ಲ ಎನ್ನುವುದೆ ನಮ್ಮೆಲ್ಲರ ಆತಂಕಕ್ಕೆ ಕಾರಣವಾಗಿದೆ. ಈ ಅಸ್ವಸ್ಥ ಜಗತ್ತಿನ ಒಂದು ಭಾಗವಾಗಿರುವ ನಾವು ಏಕಕಾಲಕ್ಕೆ ವಯ್ಯಕ್ತಿಕವೂ ಸಾರ್ವತ್ರಿಕವೂ ಆದ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ದಾರಿದ್ರ್ಯ, ಅನಕ್ಷರತೆ, ಮೂಢನಂಬಿಕೆ, ಪರಿಸರ ನಾಶ ಹಾಗೂ ಮಾಲಿನ್ಯ, ಮೇಲು ವರ್ಗದವರಿಂದ ಕೆಳ ವರ್ಗದವರ ಮತ್ತು ಮಹಿಳೆಯರ ಶೋಷಣೆ, ಸಾರ್ವತ್ರಿಕವಾಗಿ ಹಬ್ಬುತ್ತಿರುವ ಭ್ರಷ್ಟಾಚಾರ, ನಮ್ಮ ಪ್ರಾಚೀನ ಪರಂಪರೆಗೂ ನಮ್ಮ ವರ್ತಮಾನಕ್ಕೂ ನಡುವೆ ಏರ್ಪಟ್ಟ ಕಂದರ, ಧಾರ್ಮಿಕ ಮೂಲಭೂತವಾದಿಗಳ ಹಾಗೂ ಪುರೋಹಿತಶಾಹೀ ಪ್ರವೃತ್ತಿಗಳ ಪ್ರಾಬಲ್ಯ, ಚರಿತ್ರೆಯನ್ನು ತಮ್ಮ ಮೂಗಿನ ನೇರಕ್ಕೆ ತಕ್ಕಂತೆ ವ್ಯಾಖ್ಯಾನಿಸುವ ಮತ್ತು ಚರಿತ್ರೆಯಿಂದ ಯಾವ ಪಾಠವನ್ನೂ ಕಲಿಯಲು ನಿರಾಕರಿಸುವ ಮನೋಧರ್ಮ, ವೈಜ್ಞಾನಿಕ ದೃಷ್ಟಿಕೋನದ ಕೊರತೆ, ಸಮರ್ಥವಾದ ಮಾರ್ಗದರ್ಶಕ ಸತ್ವಗಳ ವಿರಳತೆ– ಇತ್ಯಾದಿ ಕಾರಣಗಳು ನಮ್ಮ ಪ್ರಸ್ತುತ ಬದುಕನ್ನು ಇನ್ನಷ್ಟು ಅಸ್ವಸ್ಥಗೊಳಿಸುತ್ತಿವೆ. ಈ ಅಸ್ವಸ್ಥತೆ ನಮ್ಮ ಕಲೆ–ಸಾಹಿತ್ಯ–ಶಿಕ್ಷಣ–ಸಂಸ್ಕೃತಿಗಳಿಗೆ ಒಂದು ದೊಡ್ಡ ಆತಂಕವೂ, ಸವಾಲೂ ಆಗಿವೆ.

ಈ ಹಿನ್ನೆಲೆಯಲ್ಲಿ ನಾವು ಭಾರತದ ನಿಜವಾದ ಸಂಸ್ಕೃತಿಯ ಸ್ವರೂಪವನ್ನೂ ಮತ್ತು ಈ ಸಂಸ್ಕೃತಿಯ ನಿರ್ಮಾಣದಲ್ಲಿ ವಿವಿಧ ಮತ–ಧರ್ಮಗಳು ವಹಿಸಿರುವ ಪಾತ್ರವನ್ನೂ ಸರಿಯಾಗಿ ಅರ್ಥ ಮಾಡಿಕೊಂಡು, ನಮ್ಮ ಅಸ್ವಸ್ಥತೆಗೆ ಅಗತ್ಯವಾದ ಪರಿಹಾರಗಳನ್ನು ಕಂಡುಕೊಳ್ಳಬೇಕಾಗಿದೆ. ದೇವರಾಗಲಿ, ದೇವಸ್ಥಾನಗಳಾಗಲಿ,

ಧರ್ಮವಾಗಲಿ ಇರುವುದು ಮನುಷ್ಯರಿಗಾಗಿ ಹಾಗೂ ಮನುಷ್ಯರಿಂದ ಎಂಬ ಮೂಲ ಸಂಗತಿಗಳನ್ನು ಮರೆತ ಕಾರಣದಿಂದ, ಇತ್ತೀಚಿಗೆ ಅವ್ಯಚಾರಿಕವೂ ಹಿಂಸಾರಭಸಮತಿಯೂ ಆದ ಪ್ರವೃತ್ತಿಗಳು ಉಲ್ಬಣಗೊಂಡು, ಎಂತಹ ಅನರ್ಥ ಪರಂಪರೆ ಗಳು ಸಂಭವಿಸಿ, ಈ ದೇಶದ ಬದುಕು ಹೇಗೆ ಅಲ್ಲೋಲ ಕಲ್ಲೋಲವಾಯಿತೆಂಬುದನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸಬೇಕಾಗಿಲ್ಲ. ಮತ್ತು ದೇವರು, ಧರ್ಮ, ದೇವಸ್ಥಾನಗಳಿಗಿಂತ ಮನುಷ್ಯ ಹಾಗೂ ಅವನನ್ನು ಒಳಗೊಂಡ ಸಾಮಾಜಿಕ ಬದುಕಿನ ಯೋಗಕ್ಷೇಮ ಎಲ್ಲದಕ್ಕಿಂತ ದೊಡ್ಡದು ಎಂಬುದನ್ನು ನಾವಿನ್ನೂ ತಿಳಿದುಕೊಳ್ಳಬೇಕಾಗಿದೆ. ಹಾಗೆಯೇ ಇಂಡಿಯಾದ ಸಂಸ್ಕೃತಿಯ ಮುಖ್ಯವಾದ ಲಕ್ಷಣವೆಂದರೆ ಅದರ ಬಹುಮುಖತ್ವವೇ; ಈ ಬಹುಮುಖೀ ಸಂಸ್ಕೃತಿಯನ್ನು ರೂಪಿಸುವಲ್ಲಿ ವಿವಿಧ ಧರ್ಮಗಳ ಕೊಡುಗೆ ತುಂಬ ಮಹತ್ವದ್ದು ಎಂಬುದನ್ನೂ ನಾವು ನೆನಪಿನಲ್ಲಿ ಇರಿಸಿಕೊಳ್ಳಬೇಕಾಗಿದೆ. ಈ ದೇಶದ ನೆಲದಲ್ಲಿ ಜಗತ್ತಿನ ಬಹುದೊಡ್ಡ ಧರ್ಮಗಳಾದ ಇಸ್ಲಾಂ ಹಾಗೂ ಕ್ರೈಸ್ತ ಮತ್ತು ಸೂಫೀ ಧರ್ಮಗಳು ನೆಲಸಿವೆ; ಪ್ರಾಚೀನ ಹಿಂದೂ–ವೈದಿಕ–ಧರ್ಮದ ಜತೆಗೆ, ಅದಕ್ಕೆ ಪ್ರತಿಕ್ರಿಯೆಯಾಗಿ ಸಂಭವಿಸಿದ ಬೌದ್ಧ, ಜೈನ, ವೀರಶೈವ, ಸಿಖ್ ಇತ್ಯಾದಿ ಧರ್ಮಗಳೂ ಸಮಾನಾಂತರವಾಗಿ ಇವೆ. ಈ ಎಲ್ಲ ಧರ್ಮಗಳೂ ಶಿಲ್ಪ, ಚಿತ್ರ, ಸಂಗೀತ ಹಾಗೂ ವಿವಿಧ ವಿಚಾರಧಾರೆಗಳನ್ನು ಕೊಡುಗೆಯಾಗಿ ನೀಡಿವೆ. ಈ ವಿವಿಧ ಧರ್ಮಗಳ ಸಹಬಾಳ್ವೆ ಹಾಗೂ ಕೊಡು–ಪಡೆಗಳಿಂದ ರೂಪುಗೊಂಡ ಜೀವನ ಕ್ರಮವು ಇಡೀ ದೇಶದ ಸಂಸ್ಕೃತಿಯ ಸ್ವರೂಪವನ್ನು ನಿರ್ಣಯಿಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಈ ಸಂಗತಿಯನ್ನು ಅರ್ಥ ಮಾಡಿಕೊಳ್ಳಬೇಕಾದರೆ ಇಂಡಿಯಾದ ಹಾಗೂ ಜಗತ್ತಿನ ವಿವಿಧ ಧರ್ಮಗಳನ್ನು ಮತ್ತು ವಿಚಾರಧಾರೆಗಳನ್ನೂ, ತೆರೆದ ಮನಸ್ಸಿನಿಂದ ತಿಳಿದುಕೊಳ್ಳುವುದನ್ನೂ ಗೌರವಿಸುವುದನ್ನೂ ಸಹಿಸುವುದನ್ನೂ ನಮ್ಮ ನಮ್ಮ ಅಂತರಾಳಗಳಲ್ಲಿ ಅರಗಿಸಿ ಕೊಳ್ಳುವುದೊಂದೇ ಸರಿಯಾದ ದಾರಿಯಾಗಿದೆ.

ಇಂಥದೊಂದು ನಿಲುವನ್ನು ಪ್ರತಿಪಾದಿಸುವ 'ಕೈಪಿಡಿ' ಒಂದನ್ನು, ಮುಖ್ಯವಾಗಿ ನಮ್ಮ ಕನ್ನಡನಾಡಿನ ಯುವಕರಿಗಾಗಿ, ಸಿದ್ಧಪಡಿಸಿಕೊಡಬೇಕೆಂದು ಕೆಲವು ತಿಂಗಳುಗಳ ಹಿಂದೆ 'ನ್ಯಾಷನಲ್ ಬುಕ್ ಟ್ರಸ್ಟ್–ಇಂಡಿಯಾ'ದ ಮಾನ್ಯ ಅಧ್ಯಕ್ಷರೂ, ನನ್ನ ಬಹುಕಾಲದ ಮಿತ್ರರೂ ಆದ ಡಾ.ಯು.ಆರ್. ಅನಂತಮೂರ್ತಿಯವರು ನನ್ನನ್ನು ಕೇಳಿಕೊಂಡರು. ಈ ಕೆಲಸ ತುಂಬ ಕಷ್ಟದ್ದು. ಆದರೆ ಅನಂತಮೂರ್ತಿಯವರ ವಿಶ್ವಾಸಕ್ಕೆ ಕಟ್ಟುಬಿದ್ದು ಇದನ್ನು ಒಪ್ಪಿಕೊಂಡೆ. ಜತೆಗೆ ನನ್ನ ನೆರವಿಗಾಗಿ–ಸಹ ಸಂಪಾದಕರನ್ನಾಗಿ, ಡಾ|| ಶ್ರೀರಾಮಭಟ್ಟ ಮತ್ತು ಶ್ರೀ ಮಾಹೆರ್ ಮನ್ಸೂರ್–ಅವರನ್ನೂ ಕರೆದುಕೊಂಡೆ. ಅದರ ಪರಿಣಾಮವೇ ಈ ಕಿರುಕೃತಿ 'ದೀಪಧ್ವನಿ'.

ಇಂಥದೊಂದು ಸಂಕಲನವನ್ನು ಸಿದ್ಧಪಡಿಸುವಲ್ಲಿ ನಮ್ಮ ಆಯ್ಕೆಯನ್ನು ವೇದ, ಕುರ್‌ಆನ್, ಬೈಬಲ್‌ಗಳ ಜತೆಗೆ, ಭಾರತೀಯ ಪರಿಸರದ ಸಂತರ, ಕವಿಗಳ ಹಾಗೂ ವಿಚಾರವಂತರ ಅಭಿಪ್ರಾಯಗಳಿಗೆ ಸೀಮಿತಗೊಳಿಸಿಕೊಂಡಿದ್ದೇವೆ. ಹನ್ನೊಂದು ಉಪವಿಭಾಗಗಳಲ್ಲಿ ಅಳವಡಿಸಿರುವ ಇಲ್ಲಿನ ಉಲ್ಲೇಖಗಳು ಸ್ಥೂಲವಾಗಿ ಒಂದು ನಿರ್ದಿಷ್ಟವಾದ ಆಲೋಚನಾ ಸರಣಿಯನ್ನು ಪ್ರತಿನಿಧಿಸುತ್ತವೆ. ಅನೇಕ ಮೂಲ ಗಳಿಂದ ಆಯ್ದು ಮತ್ತು ಹಲವು ಭಾಷೆಗಳಿಂದ ಕನ್ನಡಕ್ಕೆ ಅನುವಾದ ಮಾಡಿಕೊಂಡಿರುವ ಈ ವಿಚಾರಧಾರೆ, ಮುಖ್ಯವಾಗಿ ಪರನಿಷ್ಠ ನಿಲುವಿಗೆ ಹೆಚ್ಚು ಒತ್ತನ್ನು ಕೊಡದೆ ಹಾಗೂ ಕೇವಲ ನೀತಿನಿಷ್ಠವಾಗದೆ, ಈ ಲೋಕದಲ್ಲಿ ಮನುಷ್ಯರಾಗಿ ನಾವು ಚೆನ್ನಾಗಿ ಬದುಕಬೇಕಾದರೆ ಯಾವ ಬಗೆಯ ಮಾನವೀಯ ಸಂಬಂಧಗಳನ್ನು ರೂಢಿಸಿಕೊಳ್ಳುವುದು ಅಗತ್ಯವೆಂಬ, ಯಾವ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕೆಂಬ, ಯಾವ ಜೀವನ ಪ್ರೀತಿ ಹಾಗೂ ವೈಚಾರಿಕತೆಗಳನ್ನು ಬೆಳೆಯಿಸಿಕೊಳ್ಳಬೇಕೆಂಬ, ಈ ಹೊತ್ತಿನ ಅನೇಕ ವಿಚ್ಛಿದ್ರಕಾರಕ ಶಕ್ತಿ ಗಳ ನಡುವೆ ನಮ್ಮ ರಾಷ್ಟ್ರದ ಏಕತೆ ಹಾಗು ಸಮಗ್ರತೆಗಳನ್ನು ಕಾಯ್ದುಕೊಳ್ಳಬೇಕಾದರೆ ನಾವು ಬೆಳೆಯಿಸಿ ಕೊಳ್ಳಬೇಕಾದ 'ರಾಷ್ಟ್ರೀಯತೆ'ಯ ಕಲ್ಪನೆ ಹೇಗಿರಬೇಕೆಂಬ ಕಡೆಗೆ ಕೇಂದ್ರೀಕೃತವಾಗಿದೆ. ಒಟ್ಟಿನಲ್ಲಿ ಇದು ಜಗತ್ತಿನ 'ದೀಪ' ಗಳು–ಅಂದರೆ

ಸಂಬಂಧಗಳನ್ನು ರೂಢಿಸಿಕೊಳ್ಳುವುದು ಅಗತ್ಯವೆಂಬ, ಯಾವ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕೆಂಬ, ಯಾವ ಜೀವನ ಪ್ರೀತಿ ಹಾಗೂ ವೈಚಾರಿಕತೆಗಳನ್ನು ಬೆಳೆಯಿಸಿಕೊಳ್ಳಬೇಕೆಂಬ, ಈ ಹೊತ್ತಿನ ಅನೇಕ ವಿಚ್ಛಿದ್ರಕಾರಕ ಶಕ್ತಿಗಳ ನಡುವೆ ನಮ್ಮ ರಾಷ್ಟ್ರದ ಏಕತೆ ಹಾಗು ಸಮಗ್ರತೆಗಳನ್ನು ಕಾಯ್ದುಕೊಳ್ಳಬೇಕಾದರೆ ನಾವು ಬೆಳೆಯಿಸಿಕೊಳ್ಳಬೇಕಾದ 'ರಾಷ್ಟ್ರೀಯತೆ'ಯ ಕಲ್ಪನೆ ಹೇಗಿರಬೇಕೆಂಬ ಕಡೆಗೆ ಕೇಂದ್ರೀಕೃತವಾಗಿದೆ. ಒಟ್ಟಿನಲ್ಲಿ ಇದು ಜಗತ್ತಿನ 'ದೀಪ' ಗಳು–ಅಂದರೆ ಬೆಳಕನ್ನು ಕಂಡವರು ಹಾಗೂ ಪಡೆದವರು–ಆಡಿದ 'ಧ್ವನಿ'ಯಾಗಿ, ಅಥವಾ 'ಮಾತಾಗಿ' ಅಥವಾ ಚೆಲ್ಲಿದ 'ಬೆಳಕಾಗಿ' ಕಾಣಿಸಬೇಕೆಂಬುದು ನಮ್ಮ ಆಶಯವಾಗಿದೆ.

ಈ ಸಂಕಲನವನ್ನು ಸಿದ್ಧಪಡಿಸುವಲ್ಲಿ ನನ್ನ ಜತೆಗೆ ನಿಂತ ಡಾ|| ಶ್ರೀರಾಮಭಟ್ಟ ಮತ್ತು ಶ್ರೀ ಮಾಹೆರ್ ಮನ್ಸೂರ್ ಅವರ ಸಹಕಾರವನ್ನು ಪ್ರೀತಿಯಿಂದ ನೆನೆಯುತ್ತೇನೆ. ಈ ಒಂದು ಕಾರ್ಯವನ್ನು ವಿಶ್ವಾಸದಿಂದ ವಹಿಸಿಕೊಟ್ಟ, ಪ್ರಿಯ ಡಾ. ಯು.ಆರ್ ಅನಂತಮೂರ್ತಿಯವರಿಗೆ, ಇದರ ಪ್ರಕಟಣೆಯ ಜವಾಬ್ದಾರಿಯನ್ನು ವಹಿಸಿಕೊಂಡ 'ನ್ಯಾಷನಲ್ ಬುಕ್ ಟ್ರಸ್ಟ್–ಇಂಡಿಯಾ'ದ ಗೌರವಾನ್ವಿತ ನಿರ್ದೇಶಕರಾದ ಶ್ರೀ ಅರವಿಂದ ಕುಮಾರ್ ಅವರಿಗೆ, ಇದರ ವ್ಯವಹಾರವನ್ನು ಸುಗಮವಾಗಿ ನೋಡಿಕೊಂಡ, ನ್ಯಾಷನಲ್ ಬುಕ್ ಟ್ರಸ್ಟ್‌ನ ಕನ್ನಡ ಶಾಖೆಯ ಸಂಪಾದಕರಾದ ಶ್ರೀ ಎಂ. ಸುಬ್ಬರಾವ್ ಅವರಿಗೆ ಮತ್ತು ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿರುವ ಲೇಸರ್ ಲೈನ್ ಗ್ರಾಫಿಕ್ಸ್‌ರವರಿಗೆ ಈ ಕಿರುಕೃತಿಯ ಸಂಪಾದಕ ಮಂಡಲಿಯ ಪರವಾಗಿ ವಂದನೆಗಳು.

ಬೆಂಗಳೂರು. **ಜಿ. ಎಸ್. ಶಿವರುದ್ರಪ್ಪ**

ಸೆಪ್ಟಂಬರ್ 1993

— ೧ —

ನಮ್ಮ ಕಿವಿಗಳು ಒಳ್ಳೆಯದನ್ನು ಕೇಳಲಿ
ನಮ್ಮ ಕಣ್ಣುಗಳು ಒಳ್ಳೆಯದನ್ನು ಕಾಣಲಿ
ಆರೋಗ್ಯಪೂರ್ಣ ಸಂಪನ್ನ ಶರೀರದಿಂದ
ದೈವದತ್ತವಾದ ಪೂರ್ಣಾಯುಷ್ಯವನ್ನು ನಾವು
ಅನುಭವಿಸುವಂತಾಗಲಿ.

**–ಯಜುರ್ವೇದ**

ಇಹಲೋಕದ ಕರ್ತವ್ಯ ಕರ್ಮಗಳನ್ನು ಮಾಡುತ್ತಲೇ
ನೂರು ವರ್ಷ ಬದುಕೋಣ
ಇದರ ಹೊರತು ಬೇರೆಯ ದಾರಿಯೆ ಇಲ್ಲ.

**–ಈಶೋಪನಿಷತ್**

ಸತ್ತಿನಿಂದ ಅಸತ್ತಿನೆಡೆಗೆ
ತಮಸ್ಸಿನಿಂದ ಬೆಳಕಿಗೆ
ಮೃತ್ಯುವಿನಿಂದ ಅಮೃತಕ್ಕೆ
ನಮ್ಮನ್ನು ಕರೆದುಕೊಂಡು ಹೋಗು.

**–ಬೃಹದಾರಣ್ಯಕ ಉಪನಿಷತ್**

ಯಾವುದು ಭೂಮವೋ (ಮಹತ್ತಾದುದೋ)
ಆದರಲ್ಲಿ ಸುಖವಿದೆ.
ಅಲ್ಪವಾದುದರಲ್ಲಿ ಸುಖವಿಲ್ಲ.

**–ಛಾಂದೋಗ್ಯ ಉಪನಿಷತ್**

ಈ ಜಗತ್ತಿನ ಸಮಸ್ತವೂ
ಆ ಜಗನ್ನಿಯಾಮಕ ಶಕ್ತಿಯಿಂದ ಆವೃತವಾಗಿದೆ.
ಆದ ಕಾರಣ ನೀನು ತ್ಯಾಗಬುದ್ಧಿಯಿಂದ ಬದುಕಬೇಕು
ಯಾರೊಬ್ಬರ ಸ್ವತ್ತಿಗೂ ಆಸೆಪಡಬೇಡ

**–ಈಶೋಪನಿಷತ್**

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವರು
ವೀರರೂ ಅಲ್ಲ, ಧೀರರೂ ಅಲ್ಲ.
ಇದು ಕಾರಣ ಮೂರು ಲೋಕವೆಲ್ಲವೂ
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ;
ಗುಹೇಶ್ವರನೆಂಬ ಲಿಂಗವನವರೆತ್ತಬಲ್ಲರೋ ?

**–ಅಲ್ಲಮಪ್ರಭು.**

ಮರ್ತ್ಯಲೋಕವೆಂಬುದು
ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ
ಕೂಡಲ ಸಂಗಮದೇವ

**–ಬಸವಣ್ಣ**

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದೊಡೆಂತಯ್ಯ ?
ಸಮುದ್ರದ ತಡಿಯೊಳಗೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದೊಡೆಂತಯ್ಯ ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದೊಡೆಂತಯ್ಯ ?
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯ
ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ-ನಿಂದೆಗಳು ಬಂದರೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

**-ಅಕ್ಕಮಹಾದೇವಿ**

ಪರದ ಮೇಲ್ಕಣ್ಣಿಟ್ಟು ಧರೆಯ ತುಚ್ಛವೆನ್ನುತ್ತ
ತೊರೆದಾಯಸಂಗೊಳ್ಳೆ ದೊರೆವ ಫಲವೇನು ?
ಸುರಧನುವಿಗೇಣಿಯಿಡ ಹೊರಟು, ನಿನ್ನಂಗಳದ
ಕಿರುಹೂವ ಮರೆಯುವೆಯ ? -ಮಂಕುತಿಮ್ಮ

**-ಡಿ.ವಿ.ಜಿ.**

ಅವನವನ ಜೀವನಕ್ಕೆ ಅವನವನೇ ದುಡಿದು
ಉತ್ತರ ಗಳಿಸಬೇಕು. ಆದರಿಂದ ಮಾತ್ರ
ಜೀವನ ಸಾರ್ಥಕ. ಹೀಗಾಗಲು 'ಬಾಳ್ವೆ'ಯನ್ನು
ನಾವು ನಿರಾಕರಿಸದೆ ಮೊದಲಿಗೆ 'ಒಪ್ಪ'ಬೇಕು.

**-ಶಿವರಾಮ ಕಾರಂತ**

ದೇವರು ನಿನ್ನೆದುರಿಗೊಂದು ಏಣಿಯನ್ನಿರಿಸಿದ್ದಾನೆ:
ನಾವು ಹತ್ತಬೇಕು, ಮೆಟ್ಟಿಲಿಂದ ಮೆಟ್ಟಿಲಿಗೆ.
ನಿನಗೆ ಕಾಲುಗಳಿವೆ, ಆದರೆ ಹೆಳವನಂತೆ
ಯಾಕೆ ನಟನೆ ಮಾಡುತ್ತೀಯು ?
ನಿನಗೆ ಕೈಗಳಿವೆ, ಯಾಕೆ ಮುಷ್ಟಿಯು ಹಿಡಿತವನ್ನು
ಸಡಿಲಿಸುತ್ತೀಯು ?
ಇರುವುದೆಲ್ಲದಕ್ಕು ವಿದಾಯ ಹೇಳುವುದೆಂದರೆ
ಭಗವಂತನ ಕೊಡುಗೆಗೆ ವಿಮುಖನಾದಂತೆ
ದೇವರಲ್ಲಿ ಶ್ರದ್ಧೆಯಿಟ್ಟು ಬೀಜಗಳನ್ನು ಬಿತ್ತು,
ನಾಳಿನ ಬೆಳೆಯು ಬಗ್ಗೆ ಯೋಚನೆಯೇಕೆ ?

–ರೂಮಿ

ಎಲ್ಲಿ ದಾರಿಗಳಿಲ್ಲವೋ ಅಲ್ಲಿ
ದಾರಿ ಮಾಡಿಕೊಂಡು ಮುನ್ನಡೆಯಿರಿ,
ಯಾವುದಕ್ಕೂ ಹೆದರದಿರಿ; ಯಾವುದನ್ನೂ ಲಕ್ಷಿಸದಿರಿ,
ಖಡ್ಗಮೃಗದಂತೆ ಏಕಾಕಿಯಾಗಿ ಅಲೆಯಿರಿ.

–ಬುದ್ಧ (ದಮ್ಮಪದ)

ನಿಮಗೆ ನೀವೇ ದಾರಿದೀಪಗಳು.
ಇನ್ನು ಯಾರ ಆಶ್ರಯವನ್ನೂ ಆಶಿಸಬೇಡಿರಿ,
ಸತ್ಯವೆ ನಿಮ್ಮ ದಾರಿದೀಪ; ಅದನ್ನು ದೃಢವಾಗಿ ಹಿಡಿಯಿರಿ.
.. ಯಾರು ಈಗಾಗಲಿ, ನನ್ನ ನಂತರವಾಗಲಿ
ತಮಗೆ ತಾವೇ ದಾರಿದೀಪಗಳಾಗುತ್ತಾರೋ
ಇನ್ನು ಯಾವ ಆಶ್ರಯವನ್ನೂ ಬಯಸುವುದಿಲ್ಲವೋ
ಸತ್ಯವೇ ತಮ್ಮ ಆಶ್ರಯಸ್ಥಾನವೆಂದು ತಿಳಿದು
ನಡೆಯುತ್ತಾರೆಯೋ, ಅವರು ಮಾತ್ರ
ಪರಮ ಗುರಿಯನ್ನು ತಲುಪುತ್ತಾರೆ.

–ಬುದ್ಧ (ದಮ್ಮಪದ)

ಏಳಿರಿ, ಎಚ್ಚರಗೊಳ್ಳಿರಿ
ಗುರಿ ತಲುಪುವವರೆಗೂ ನಿಲ್ಲದಿರಿ.
ನೀವು ನಡೆಯುವ ದಾರಿ
ಕತ್ತಿಯ ಅಲಗಿನಂತೆ ಹರಿತವಾದದ್ದು
ಹಾಗೂ, ದುರ್ಗಮವಾದದ್ದು.

–ಕಠೋಪನಿಷತ್

ಕಿರಿದಾದ ಬಾಗಿಲ ಮೂಲಕ ನೀನು ಪ್ರವೇಶ ಮಾಡು;
ಯಾಕೆಂದರೆ ವಿನಾಶದ ದಾರಿ ವಿಶಾಲವಾಗಿದೆ
ಅದಕ್ಕೆ ಪ್ರವೇಶಿಸುವ ಬಾಗಿಲು ಅಗಲವಾಗಿದೆ;
ಆದಕಾರಣ ಆ ದಾರಿಯಲ್ಲಿ ಹೋಗುವವರೇ ಹೆಚ್ಚು.
ಬದುಕಿನ ದಾರಿ ನೇರವಾಗಿದೆ
ಅದಕ್ಕೆ ಪ್ರವೇಶಿಸುವ ಬಾಗಿಲು ಇಕ್ಕಟ್ಟಾಗಿದೆ
ಆದಕಾರಣ ಆ ದಾರಿ ನಡೆವವರು ಕೆಲವೇ ಕೆಲವರು.

**–ಬೈಬಲ್**

ಶರೀರವೆ ರಥ
ಆತ್ಮನೆ ರಥಿಕ
ಬುದ್ಧಿಯೆ ಸಾರಥಿ,
ಮನಸ್ಸೇ ಲಗಾಮು

**–ಕಠೋಪನಿಷತ್**

ಕಡೆಗೀಲಿಲ್ಲದ ಬಂಡಿ
ಹೊಡೆಗೆಡುವುದು ಮಾಬುದೇ ?
ಕಡೆಗೀಲು ಬಂಡಿಗಾಧಾರ
ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ
ರಾಮನಾಥ.

**–ಜೇಡರ ದಾಸಿಮಯ್ಯ.**

ಕಾಲುಗಳೆರಡು ಗಾಲಿ ಕಂಡಯ್ಯಾ
ದೇಹವೆಂಬುದು ತುಂಬಿದ ಬಂಡಿ ಕಂಡಯ್ಯಾ
ಬಂಡಿಯ ಹೊಡೆವವರೈವರು ಮಾನಿಸರು,
ಒಬ್ಬರಿಗೊಬ್ಬರು ಸಮವಿಲ್ಲಯ್ಯಾ,
ಆದರಿಚ್ಛೆಯನರಿದು ಹೊಡೆಯದಿದ್ದರೆ
ಆದರಚ್ಚು ಮುರಿಯಿತು–ಗುಹೇಶ್ವರಾ

–ಅಲ್ಲಮ ಪ್ರಭು

ಕಾಮಕ್ರೋಧಾದಿಗಳು ಮನುಷ್ಯನನ್ನು
ಒಳ್ಳೆಯದರಿಂದ ತಪ್ಪು ದಾರಿಗೆ ಎಳೆಯುತ್ತವೆ.
ಮನುಷ್ಯನಿಗೆ ಅವೇ ನಿಜವಾದ ಶತ್ರುಗಳು.
ಅವನ್ನು ಗೆದ್ದರೆ ಲೋಕವನ್ನೆ ಗೆದ್ದಂತೆ.
ಹಿರಿತನವನ್ನು ಬಯಸುವವನು ಇಂದ್ರಿಯಗಳನ್ನು
ಅರ್ಥ ಧರ್ಮಗಳ ಸಲುವಾಗಿ ಅಂಕೆಯಲ್ಲಿರಿಸಬೇಕು.
ಇಂದ್ರಿಯಗಳನ್ನು ಅಂಕೆಯಲ್ಲಿ ನಿಲ್ಲಿಸಿಕೊಳ್ಳದೆ,
ಅವುಗಳ ಇಷ್ಟದಂತೆ ಹರಿಯಲು ಬಿಟ್ಟರೆ,
ಸಾರಥ್ಯವರಿಯದವನನ್ನು ದುರ್ದಾಂತವಾದ ಕುದುರೆಗಳು
ಹೇಗೋ ಹಾಗೆ ಅವು ನಮ್ಮನ್ನು ಎಲ್ಲೆಲ್ಲಿಗೋ
ಸೆಳೆದೊಯ್ಯುತ್ತವೆ.

–ಮಹಾಭಾರತ

ಯಾವ ಮಾನುಷ್ಯನು ವಿಜ್ಞಾನ(ಪ್ರಖರಬುದ್ಧಿಯನ್ನು)ವನ್ನು
ಸಾರಥಿಯನ್ನಾಗಿ ಮಾಡಿಕೊಂಡಿದ್ದಾನೆಯೋ, ಮನಸ್ಸೆಂಬ
ಕಡಿವಾಣವನ್ನು ಹಿಡಿದಿರುವನೋ, ಅಂಥವನು ಈ
ಲೋಕದಲ್ಲಿ ಮಹೋನ್ನತವಾದ ಗುರಿಯನ್ನು ಮುಟ್ಟುತ್ತಾನೆ.

**–ಕಠೋಪನಿಷತ್**

ಚಲಿಸುತ್ತಿರುವ ರಥವನ್ನು ನಿಲ್ಲಿಸಬಲ್ಲವನನ್ನು
ಸಾರಥಿ ಎಂದು ಕರೆಯುತ್ತೇನೆ.
ಹಾಗೆಯೆ ಕ್ರೋಧವನ್ನು ಉಪಶಮಿಸಬಲ್ಲವನನ್ನು
ಸಾರಥಿ ಎಂದು ಕರೆಯುತ್ತೇನೆ.
ಹಾಗೆ ಮಾಡಲು ಸಾಧ್ಯವಿಲ್ಲದವನು,
ಕೇವಲ ಲಗಾಮನ್ನು ಹಿಡಿದವನಷ್ಟೆ.

**–ಬುದ್ಧ (ದಮ್ಮಪದ)**

ಸಂಗ್ರಾಮದಲ್ಲಿ ಸಹಸ್ರಸಂಖ್ಯೆಯ
ಯೋಧರನ್ನು ಗೆಲ್ಲುವುದಕ್ಕಿಂತ,
ತನ್ನನ್ನು ತಾನು ಮೊದಲು ಗೆಲ್ಲುವುದು ಮಹತ್ತಾದುದು.

**–ಬುದ್ಧ (ದಮ್ಮಪದ)**

ತನ್ನನ್ನು ತಾನು ಯಾರು ಗೆದ್ದಿದ್ದಾನೋ
ಆವನಿಗೆ ಆವನೇ ಬಂಧು.
ತನ್ನನ್ನು ತಾನು ಯಾವಾಗ ಗೆಲ್ಲುವುದಿಲ್ಲವೋ
ಆಗ ಆವನಿಗೆ ಆವನೇ ಶತ್ರು.

**–ಭಗವದ್ಗೀತಾ**

ಅಪ್ರಮತ್ತನಾದವನು (ಎಚ್ಚರಿಕೆಯಿಂದ ಇರುವವನು)
ಅಮೃತತತ್ವದ ಪಥದಲ್ಲಿರುತ್ತಾನೆ.
ಪ್ರಮತ್ತನಾದವನು (ಎಚ್ಚರಿಕೆ ಇಲ್ಲದವನು)
ಮೃತ್ಯುವಿನ ದಾರಿಯಲ್ಲಿರುತ್ತಾನೆ.
ಅಪ್ರಮತ್ತರಿಗೆ ಎಂದೂ ಮರಣವಿಲ್ಲ;
ಪ್ರಮತ್ತರು ಯಾವಾಗಲೋ ಮರಣಹೊಂದಿರುತ್ತಾರೆ.

**–ಬುದ್ಧ (ಧಮ್ಮಪದ)**

ಪ್ರಮಾದವಶದಿಂದ ಮೆಟ್ಟಿಲುಗಳ ಸಾಲಿನ ಮೇಲೆ
ಬಿದ್ದ ಚೆಂಡು, ಹೇಗೆ
ಕೆಳಕ್ಕೆ ಪುಟಿದು ಹೋಗುವುದೋ ಹಾಗೆ
ತನ್ನ ಗುರಿಯಿಂದ ಚ್ಯುತವಾದ ಮನಸ್ಸು
ಕೆಳಮುಖವಾಗಿಯೇ ಜಾರಿಹೋಗುತ್ತದೆ

**–ಶಂಕರಾಚಾರ್ಯ**

ನಮ್ಮ ಈ ಮನಸ್ಸು,
ನಿಗ್ರಹಕ್ಕೆ ಅಸಾಧ್ಯವಾದುದೂ, ಚಲಿಸುವ ಸ್ವಭಾವದ್ದೂ
ಎನ್ನುವುದರಲ್ಲಿ ಸಂಶಯವೇ ಇಲ್ಲ.
ಆದಕಾರಣ ಅದನ್ನು ಅಭ್ಯಾಸ ಮತ್ತು ವೈರಾಗ್ಯದ ಮೂಲಕ
ಪಳಗಿಸಬೇಕು.

**–ಭಗವದ್ಗೀತಾ**

ಬಿಲ್ಗಾರನಾದವನು ತನ್ನ ಬಾಣವನ್ನು
ನೇರವಾಗಿ ಗುರಿಗೆ ಹೂಡುವಂತೆ,
ಬುದ್ಧಿವಂತನಾದ ಮನುಷ್ಯನು
ಕಾಯ್ದುಕೊಳ್ಳಲು ಅಸಾಧ್ಯವಾದ ಹಾಗೂ
ಹಿಡಿತಕ್ಕೆ ಸಿಕ್ಕದ, ಚಂಚಲವೂ ಅನಿಶ್ಚಿತವೂ ಆದ
ತನ್ನ ಆಲೋಚನೆಗಳನ್ನು ನೇರಗೊಳಿಸುತ್ತಾನೆ

**–ಬುದ್ಧ (ದಮ್ಮಪದ)**

ನೀರಗಂಟಿಯು ನೀರಿನ ಹರಿವನ್ನು ಸರಿಯಾದ
ಕಡೆಗೆ ತಿದ್ದುತ್ತಾನೆ
ಬಾಣಗಳನ್ನು ಮಾಡುವವನು, ಅವುಗಳು
ನೇರವಾಗಿರುವಂತೆ ರೂಪಿಸುತ್ತಾನೆ
ಬಡಗಿಯು ಮರವನ್ನು ಕೆತ್ತಿ ಸಮಗೊಳಿಸುತ್ತಾನೆ
ವಿವೇಕಿಯಾದವನು ತನ್ನನ್ನು ತಾನು
ದಮನಗೊಳಿಸಿಕೊಳ್ಳುತ್ತಾನೆ.

**–ಬುದ್ಧ (ದಮ್ಮಪದ)**

ಮೊದಲು ಕೈಗೆ ಎಣ್ಣೆ ಸವರಿಕೊಂಡು, ಬಳಿಕ ಹಲಸಿನ
ಹಣ್ಣು ಬಿಡಿಸಬೇಕು. ಇಲ್ಲದಿದ್ದರೆ ಕೈಗೆ ಅಂಟು
ಹತ್ತಿಕೊಂಡುಬಿಡುತ್ತದೆ. ಭಗವದ್ ಭಕ್ತಿ ಎಂಬ
ಎಣ್ಣೆಯನ್ನು ಮೊದಲು ಹವಣಿಸಿಕೊಂಡು, ಬಳಿಕ ಈ
ಲೋಕದ ಸಾಂಸಾರಿಕ ಕಾರ್ಯಗಳಲ್ಲಿ ತೊಡಗಬೇಕು.

**–ಶ್ರೀರಾಮಕೃಷ್ಣ ಪರಮಹಂಸ**

ಮನುಷ್ಯನಿಗೆ ಅಧೋಮುಖವಾದ ಪ್ರವೃತ್ತಿಗಳಿವೆ.
ಊರ್ಧ್ವಮುಖವಾದ ಪ್ರೇರಣೆಗಳಿವೆ. ಎಲ್ಲ ಜೀವನವೂ
ಇವುಗಳ ಹೋರಾಟ. ಎಷ್ಟೇ ಸಾವಕಾಶವಾಗಿ
ಆದರೂ ಪ್ರೇರಣೆಗಳು ಗೆಲ್ಲುವವು.

**–ಮಾಸ್ತಿ ವೆಂಕಟೇಶ ಅಯ್ಯಂಗಾರ್**

ನಿನ್ನ ಕೈ,ಕಾಲು ಹಾಗೂ ಶರೀರದ ಅವಯುವಗಳು
ಕೊಳೆಯಾಗಿದ್ದರೆ, ನೀರಿನಿಂದ ಶುದ್ಧವಾಗುತ್ತವೆ.
ನೀನು ಉಟ್ಟ ಬಟ್ಟೆ ಕೊಳೆಯಾಗಿದ್ದರೆ
ಒಳ್ಳೆಯ ಒಗೆತದಿಂದ ಶುದ್ಧವಾಗುತ್ತದೆ.
ನಿನ್ನ ಮನಸ್ಸು ಕೊಳೆಯಾಗಿದ್ದರೆ
ನಿಜವಾದ ಭಕ್ತಿಯಿಂದ ಶುದ್ಧವಾಗುತ್ತದೆ.

**–ನಾನಕ್**

ಹೃದಯುದ ಮಾಲಿನ್ಯದ ಪರಿಣಾಮವೇ ದುರಾಸೆ
ನಾಲಗೆಯ ಮಾಲಿನ್ಯದ ಪರಿಣಾಮವೇ ಅಸತ್ಯ
ಕಣ್ಣುಗಳ ಮಾಲಿನ್ಯದ ಪರಿಣಾಮವೇ
ಪರಸ್ತ್ರೀ ಪರಧನಗಳ ಬಯಕೆ,
ಕಿವಿಗಳ ಮಾಲಿನ್ಯವೇ ಅನ್ಯರ ಬಗ್ಗೆ
ಕೆಟ್ಟದ್ದನ್ನು ಕೇಳುವ ಚಪಲ.

**–ನಾನಕ್**

ಕಣ್ಣು ದೇಹದ ದೀಪವಾಗಿದೆ.
ಹೀಗಿರುವಲ್ಲಿ ನಿನ್ನ ಕಣ್ಣು ನೆಟ್ಟಗಿದ್ದರೆ
ನಿನ್ನ ಇಡೀ ಶರೀರವೆ ಬೆಳಕಿನಿಂದ ಕೂಡಿರುತ್ತದೆ.
ನಿನ್ನ ಕಣ್ಣು ಕೆಟ್ಟಿದ್ದರೆ
ನಿನ್ನ ಇಡೀ ಶರೀರದ ತುಂಬ ಕತ್ತಲು ಕವಿದಿರುತ್ತದೆ.
ನಿನ್ನೊಳಗಿನ ಬೆಳಕೇ ಕತ್ತಲಾಗಿ ಬಿಟ್ಟರೆ
ಅದೆಷ್ಟು ದಟ್ಟವಾದ ಕತ್ತಲು !

**–ಬೈಬಲ್**

ಮನಸ್ಸಿನೊಳಗೆ ಹುಟ್ಟುವ ದುರಾಲೋಚನೆಗಳನ್ನು
ಗೆದ್ದು ನಿಲ್ಲಲು ಇರುವ ಒಂದೇ ಒಂದು ಮಾರ್ಗವೆಂದರೆ:
ನಮ್ಮ ನಮ್ಮ ಮನಸ್ಸಿನ ಸ್ತರಗಳನ್ನು, ಮತ್ತೆ ಮತ್ತೆ
ಪರಿಶೀಲನೆಗೆ ಒಳಗುಪಡಿಸುತ್ತ, ಪರಿಭಾವಿಸುತ್ತ
ದುಷ್ಟ ವಿಚಾರಗಳನ್ನು ಆಮೂಲಾಗ್ರವಾಗಿ ಕಿತ್ತು ಹಾಕಿ
ಸದಾಲೋಚನೆಗಳನ್ನು ಬೆಳೆಯುವುದು.

**–ಬುದ್ಧ**

ಯಾವುದು ಒಳ್ಳೆಯದು ಅದನ್ನು ಈಗಲೇ ಮಾಡಬೇಕು. ಈ ಒಂದು ಕ್ಷಣ ನಿನ್ನ ಕೈಯಿಂದ ನುಸುಳಿ ಹೋಗುವುದು ಬೇಡ. ಮಾಡಬೇಕೆಂದಿರುವ ಕೆಲಸಗಳು ಹಾಗೆಯೇ ಉಳಿದುಬಿಡುತ್ತವೆ. ಸಾವು ಮನುಷ್ಯನನ್ನು ನುಂಗಿ ಹಾಕುತ್ತದೆ. ಆದ ಕಾರಣ ನಾಳೆ ಮಾಡತಕ್ಕದಾದ ಕೆಲಸವನ್ನು, ಇಂದೇ ಮಾಡಿ ಮುಗಿಸು; ಮಧ್ಯಾಹ್ನದವರೆಗೆ ತಡೆಯುಬಹುದಾದನ್ನು ಮುಂಜಾನೆಯೇ ಮಾಡಿ ಮುಗಿಸು. ಮೃತ್ಯು ಬಂದು ನೋಡಿ ನಿನ್ನ ಕೆಲಸ ಆಯಿತೆ ಇಲ್ಲವೆ ಎಂಬುದನ್ನು ಗಮನಿಸಿ ಆ ಕಾರಣಕ್ಕೆ ತಡೆ ಮಾಡುವು–ದಿಲ್ಲ.

**–ಮಹಾಭಾರತ**

ವ್ಯಕ್ತಿಗೆ ಇಂದು ದೊರೆಯುವ ಬದುಕು ಹಿಂದೆಯೂ ದೊರಕಿಲ್ಲ; ನಾಳೆಯೂ ದೊರಕುವುದಿಲ್ಲ. ಈ ವ್ಯಕ್ತಿ ಇಂದಿಗೆ ಮಾತ್ರ ಉಳಿಯುವವ. ಈ ವ್ಯಕ್ತಿತ್ವವೂ ಇಂದಿನದು, ಅದು ವ್ಯಕ್ತ ವಾಗುವ ಮನಸ್ಸು ಶರೀರಗಳೂ ಇಂದಿನವು. ಆದುದರಿಂದ ಇಂದು ಸಾಧಿಸುವ, ಪಡೆಯುವ ಜೀವದ ವಿಕಾಸವನ್ನು ಇಂದಿನ ಬದುಕಿನಲ್ಲೇ ನಾವು ಸಾಧಿಸಿಕೊಂಡು ಜೀವನ ಪ್ರವಾಹಕ್ಕೆ ನೆರ-ವಾಗಬೇಕು. ಜೀವಿಗೆ ಬದುಕು ಮುಖ್ಯ; ಅದೇ ಸರ್ವಸ್ವ.

**-ಶಿವರಾಮ ಕಾರಂತ**

ನಿಜವಾದ ಸೃಜನಶೀಲತೆಯೆ ಸ್ವಾತಂತ್ರ್ಯ; ಏನಿದೆಯೊ ಅಷ್ಟರೊಳಗೇ ತೃಪ್ತನಾಗಿ ಬದುಕುವುದು ಬಂಧನ. ಅದರೊಳಗೇ ಬದುಕುವುದು ಎಂದರೆ, ನಾವು ನಿಸ್ಸಹಾಯಕರಾಗಿ, ನಮ್ಮನ್ನು ಹೇಗೆಬೇಕೋ ಹಾಗೆ ರೂಪಿಸುವುದಕ್ಕೆ ನಿಸರ್ಗಕ್ಕೆ ನಮ್ಮನ್ನು ಒಪ್ಪಿಸಿಕೊಂಡಂತಾಗುತ್ತದೆ. ಆದರೆ, ಸೃಜನಶೀಲತೆ ಎಂದರೆ ನಮಗೆ ಬೇಕಾದದ್ದರಲ್ಲಿ ನಾವು ಬದುಕುವ ರೀತಿ. ಆಗ ಜಗತ್ತಿನ ಬಹಳಷ್ಟು ಭಾಗ, ನಮ್ಮ ಆಯ್ಕೆಯ ಸ್ವಾತಂತ್ರ್ಯಕ್ಕೆ ಒಳಪಡುತ್ತದೆ; ನಾವು ಚಲಿಸಿದಂತೆ ನಮ್ಮ ಜತೆ ಅದು ಚಲಿಸುತ್ತದೆ; ನಾವು ಎತ್ತ ಕಡೆ ಹೊರಳಿದರೆ ಅತ್ತ ಕಡೆ ಅದು ದಾರಿ ಬಿಡುತ್ತದೆ. ಮನುಷ್ಯ ತನಗೆ ದತ್ತವಾದ ಜಗತ್ತಿನಿಂದಷ್ಟೆ ತೃಪ್ತನಾಗಲಾರ, ಅದರ ಬದಲು ಆತ ತನ್ನದೇ ಆದ ಜಗತ್ತನ್ನು ನಿರ್ಮಾಣ ಮಾಡಿಕೊಳ್ಳಬೇಕಾಗು ತ್ತದೆ.

**-ರವೀಂದ್ರನಾಥ ಠಾಕೂರ್**

ಎಲ್ಲ ಕಲೆಗಳಿಗಿಂತಲೂ, ಈ ಜೀವನ ದೊಡ್ಡದು.
ಇನ್ನೂ ಮುಂದುವರಿದು ಹೇಳುವುದಾದರೆ,
ಯಾರ ಜೀವನವು ಪರಿಪೂರ್ಣತೆಯ ಹತ್ತಿರಕ್ಕೆ
ಬರುವುದೋ, ಅಂಥವನೇ ಅತಿಶ್ರೇಷ್ಠ ಕಲಾವಿದ.
ಯಾಕೆಂದರೆ, ಉದಾತ್ತ ಜೀವನದ ತಳಹದಿ ಹಾಗೂ
ಉದ್ದೇಶಗಳಿಲ್ಲದ ಕಲೆ, ಅದೆಂಥ ಕಲೆ ?

**–ಮಹಾತ್ಮ ಗಾಂಧೀ**

ಗೌರವಿಸು ಜೀವನವ, ಗೌರವಿಸು ಚೇತನವ
ಆರದೋ ಜಗವೆಂದು ಭೇದವೆಣಿಸದಿರು
ಹೋರುವುದೆ ಜೀವನ ಸಮೃದ್ಧಿಗೋಸುಗ, ನಿನಗೆ
ದಾರಿ ಆತ್ಮೋನ್ನತಿಗೆ ಮಂಕುತಿಮ್ಮ

**–ಡಿ.ವಿ.ಜಿ.**

ಶಾಂತರೂ, ಮಹಾಂತರೂ,
ಸಂಸಾರವೆಂಬ ಮಹಾಸಮುದ್ರವನ್ನು ದಾಟಿದವರೂ
ಮತ್ತು ಇತರರನ್ನು ಅವ್ಯಾಜವಾಗಿ ದಾಟಿಸುವವರೂ
ಆದ ಸಂತರು,
ವಸಂತ ಋತುವಿನ ಹಾಗೆ
ಈ ಲೋಕ ಹಿತಕ್ಕಾಗಿ ಸಂಚಾರ ಮಾಡುತ್ತಾರೆ.

**–ಶಂಕರಾಚಾರ್ಯ**

— ೨ —

ಹಳೆಯದೆಂದ ಮಾತ್ರಕ್ಕೆ ಯಾವುದೂ ಒಳ್ಳೆಯದಲ್ಲ
ಹೊಸದೆಂದ ಮಾತ್ರಕ್ಕೆ ಯಾವುದೂ ತಿರಸ್ಕರಣೀಯವಲ್ಲ
ವಿವೇಕಿಗಳು ಪರೀಕ್ಷಿಸಿ ಗ್ರಾಹ್ಯವಾದುದನ್ನು ಸ್ವೀಕರಿಸುತ್ತಾರೆ.
ಮೂರ್ಖರು ಮಾತ್ರ ಇನ್ನೊಬ್ಬರ ಅಭಿಪ್ರಾಯಕ್ಕೆ
ಜೋತುಬೀಳುತ್ತಾರೆ.

– ಕಾಳಿದಾಸ

ಅವರಿವರು ಹೇಳಿದ್ದಾರೆ ಎಂಬ ಕಾರಣಕ್ಕೆ
ಯಾವುದನ್ನೂ ಒಪ್ಪಬೇಡ,
ಪರಂಪರಾಗತವಾಗಿ ಬಂದದ್ದೆಂಬ ಕಾರಣಕ್ಕೆ ಒಪ್ಪಬೇಡ,
'ಇದು ನಿಜವಿರಲೇಬೇಕು' ಎಂದು ಆತುರದ
ತೀರ್ಮಾನಕ್ಕೆ ಬಿದ್ದು ಒಪ್ಪಬೇಡ
ನಮ್ಮ ಶಾಸ್ತ್ರ ಗ್ರಂಥಗಳಲ್ಲಿ ಹೇಳಿದೆ ಎಂಬ
ಕಾರಣಕ್ಕೆ ಒಪ್ಪಬೇಡ,
ಅಥವಾ ಇದು ಅಂಗೀಕಾರ ಯೋಗ್ಯವಾಗಿದೆ
ಎಂಬ ಊಹೆಯಿಂದ ಒಪ್ಪಬೇಡ,
ನನ್ನ ಆಚಾರ್ಯರು ಹೇಳಿದ್ದಾರೆ ಎಂಬ ಕಾರಣಕ್ಕೆ
ಒಪ್ಪಬೇಡ.
ಆದರೆ ಯಾವುದು ನಿನಗೆ ಮೌಲಿಕವಾದದ್ದೆಂದೂ,
ಕಳಂಕಿತವಾದದ್ದಲ್ಲವೆಂದೂ,
ಉಪಯುಕ್ತವೂ, ಸುಖದಾಯಕವೂ ಎಂದು
ತೋರುತ್ತದೆಯೋ
ಅಂಥದನ್ನು ಮಾತ್ರ ಒಪ್ಪಿಕೋ.

– ಬುದ್ಧ (ಅಂಗುತ್ತರ)

ಪ್ರಾಚೀನವಾದುದೆಲ್ಲವೂ, ಅದು ಪ್ರಾಚೀನವಾದುದು ಎಂಬ ಕಾರಣದಿಂದ ಒಳ್ಳೆಯದೆಂದು ನಾನು ಪ್ರತಿಪಾದಿಸುವುದಿಲ್ಲ. ದೇವರು ನಮಗೆ ಕೊಟ್ಟಿರುವ ಬುದ್ಧಿ ಶಕ್ತಿಯನ್ನು ಪ್ರಾಚೀನ ಪರಂಪರೆಯ ವಿಚಾರಗಳಿಗೆ ಸಮರ್ಪಿಸಬೇಕೆಂದು ನಾನು ಹೇಳುವುದಿಲ್ಲ.

ಯಾವುದೇ ಒಂದು ಪರಂಪರೆ, ಅದು ಎಷ್ಟೇ ಪ್ರಾಚೀನವಾದುದಾಗಲಿ ನಮ್ಮ ನೈತಿಕತೆಯೊಂದಿಗೆ ಹೊಂದಿಕೊಳ್ಳದೆ ಇದ್ದರೆ ಅದನ್ನು ಗಡೀಪಾರು ಮಾಡುವುದು ಒಳ್ಳೆಯದು. ಅಸ್ಪೃಶ್ಯತೆ ಎನ್ನುವುದು ಬಹು ಹಿಂದಿನಿಂದಲೂ ಬಂದ ಸಂಪ್ರದಾಯವಾಗಿರಬಹುದು, ಬಾಲ್ಯವಿವಾಹ ಹಾಗೂ ವೈಧವ್ಯಗಳು
ಅತಿ ಪ್ರಾಚೀನ ಸಂಪ್ರದಾಯಗಳಾಗಿರಬಹುದು,
ಹೀಗೆಯೆ ಅನೇಕ ಭಯಂಕರವಾದ ನಂಬಿಕೆಗಳೂ
ಅಂಧ ಶ್ರದ್ಧೆಗಳೂ ಬಹುಕಾಲದಿಂದ ರೂಢಿಯಲ್ಲಿರಬಹುದು,
ನನಗೆ ಶಕ್ತಿಯಿದ್ದಲ್ಲಿ ಅವುಗಳನ್ನು ನಾನು ಗುಡಿಸಿ ಹಾಕುತ್ತೇನೆ.

**–ಮಹಾತ್ಮಾ ಗಾಂಧೀ**

ಹಳೆಮತದ ಕೊಳೆಯೆಲ್ಲ ಹೊಸಮತಿಯು ಹೊಳೆಯಲ್ಲಿ
ಕೊಚ್ಚಿಹೋಗಲಿ; ಬರಲಿ ವಿಜ್ಞಾನ ಬುದ್ಧಿ,
ವೇದ ಪ್ರಮಾಣತೆಯ ಮರುಮರೀಚಿಕೆಯಲ್ಲಿ
ನೀರರಸಿ ಕೆಡದಿರಲಿ ಸ್ವಾತಂತ್ರ್ಯಸಿದ್ಧಿ.

**–ಕುವೆಂಪು**

ತತ್ತ್ವವನ್ನು ಬಲ್ಲಂಥ ಜ್ಞಾನಿಗಳ ಸೇವೆ ಮಾಡಿ,
ನಮ್ರತೆ ಹಾಗೂ ವಿವೇಕದಿಂದ
ಅವರನ್ನು ಮತ್ತೆ ಮತ್ತೆ ಪ್ರಶ್ನೆ ಮಾಡಿದರೆ,
ಅವರು ನಿನ್ನ ಜಿಜ್ಞಾಸೆಯನ್ನು ತೃಪ್ತಿಗೊಳಿಸುತ್ತಾರೆ.

**–ಭಗವದ್ಗೀತಾ**

ಪ್ರತಿಯೊಂದು ಜೀವಿಯೂ ತನ್ನ ಜೀವನಕ್ಕೆ ಅಧಿಕಾರ ಉಳ್ಳದ್ದು. ಜೀವನದಲ್ಲಿ ಪಾರತಂತ್ರ್ಯವೂ ಇದೆ; ಜೀವನ ಸ್ವಾತಂತ್ರ್ಯವೂ ಇದೆ. ಆದರೆ ವ್ಯಕ್ತಿಗೊಂದು ಬೇರೆಯೇ ಮನಸ್ಸು, ಬೇರೆಯೇ ಅನುಭವಗಳ ಅವಕಾಶವಿರುವಲ್ಲಿಯ ತನಕ, ವ್ಯಕ್ತಿ ತಾನು ತಾನಾಗಿಯೇ ಸಾಧಿಸಬಹುದಾದ ಬೆಳವಣಿಗೆಯಿದೆ. ಒಂದು ವ್ಯಕ್ತಿಯ ಜೀವನವು ಕೇವಲ ಇನ್ನೊಂದರ ಪುನರಾವೃತ್ತಿಯಾದರೆ ಅದಕ್ಕೇನು ಬೆಲೆ ?

**–ಶಿವರಾಮಕಾರಂತ**

ಬದುಕಿನ ಮೌಲ್ಯಗಳಲ್ಲಿ ಯಾವುದೂ ಸ್ಥಿರವಲ್ಲ. ಯಾವುದೂ ಚಿರನೂತನವಲ್ಲ, ಸನಾತನವೂ ಅಲ್ಲ. ಎಲ್ಲ ಕಾಲಕ್ಕೂ, ವ್ಯಕ್ತಿಯಾಗಲಿ, ಸಮುದಾಯವಾಗಲಿ ಪರಿವರ್ತನೆ ಗೊಳ್ಳುವುದು ಅತ್ಯಂತ ಸಹಜವಾದ ಲಕ್ಷಣವಾಗಿದೆ. ಪರವರ್ತನಶೀಲ ಸಮಾಜದಲ್ಲಿ ಹಳೆಯ ಮೌಲ್ಯಗಳಿಗೂ ಹೊಸ ಮೌಲ್ಯಗಳಿಗೂ ನಡೆಯುವ ನಿರಂತರ ಸಂಘರ್ಷದಲ್ಲಿ ಯಾವುದು ಅಗತ್ಯವೋ ಯಾವುದು ಅನಗತ್ಯವೋ ಎಂಬುದನ್ನು ವಿವೇಚಿಸಿ, ಪರೀಕ್ಷಿಸಿ, ಸರಿಯಾದುದನ್ನು ಬದುಕಿಗೆ ಅಳವಡಿಸಿ ಕೊಳ್ಳಬೇಕಾದ ಮಾನಸಿಕ ಸಿದ್ಧತೆಯನ್ನು ನಾವು ತುರ್ತಾಗಿ ಮಾಡಿ ಕೊಳ್ಳಬೇಕಾಗಿದೆ.

**–ಡಾ. ಬಿ.ಆರ್. ಅಂಬೇಡ್ಕರ್**

ಪವಿತ್ರವೆಂದು ಪರಿಗಣಿಸಲ್ಪಟ್ಟ ಒಂದು ದೊಡ್ಡ ಕೊಳವಿದೆ ಎಂದು ಭಾವಿಸೋಣ. ಆದರ ಒಂದೇ ಒಂದು ಹನಿ ನೀರನ್ನು ಕುಡಿದರೆ ಅಥವಾ ಮೈಮೇಲೆ ಚುಮುಕಿಸಿಕೊಂಡರೆ, ಪರಮ ಪಾಪಿಯನ್ನೂ ಉದ್ಧಾರ ಮಾಡುವುದಲ್ಲದೆ, ಆತನನ್ನು ಸ್ವರ್ಗಕ್ಕೂ ಕೊಂಡೊಯ್ಯಬಲ್ಲ ಮಹಿಮಾ ವಿಶೇಷ ಈ ನೀರಿಗಿದೆ ಎನ್ನುವ ಜನಜನಿತವೂ, ಪ್ರಾಚೀನವೂ ಆದ ಪುರಾಣ ಆ ಕೊಳಕ್ಕೆ ಇದೆ. ಆದರೆ ಈ ಹೊತ್ತು ಆ ಕೊಳದ ನೀರನ್ನು ಕುಡಿದರೆ ಅಜೀರ್ಣವ್ಯಾಧಿ ತಗಲುವ, ಮೈಮೇಲೆ ನಾಲ್ಕು ಹನಿಯನ್ನು ಚುಮ್ಮುಕಿಸಿಕೊಂಡರೆ ತುರಿಗಜ್ಜಿಗಳೇಳುವ ಸ್ಥಿತಿಯಲ್ಲಿದ್ದರೆ ನಾವೇನು ಮಾಡಬೇಕು? ಮೊದಲು ಆ ಕೊಳದ ನೀರಿಗೆ ಕ್ರಿಮಿನಾಶಕವನ್ನು ಸುರಿದು ವಿಷಪೂರಿತ ಕ್ರಿಮಿಗಳನ್ನು ಕೊಲ್ಲಲು ಪ್ರಯತ್ನಿಸಬೇಕು. ಪರಿಸ್ಥಿತಿ ಸುಧಾರಿಸದಿದ್ದರೆ ಕೊಳದ ನೀರನ್ನು ಖಾಲಿ ಮಾಡಿ ಸ್ವಚ್ಛಗೊಳಿಸಬೇಕು. ಇಷ್ಟಾದರೂ ನೀರು ವಿಷಪೂರಿತವಾಗಿದ್ದರೆ, ಆ ಕೊಳದ ನೀರಿನ ಸೆಲೆಗಳೇ ಅಶುದ್ಧ ವಾಗಿವೆಯೆಂದು ತೀರ್ಮಾನಿಸಬೇಕಾಗುತ್ತದೆ. ಇಂತಹ ಪರಿಸ್ಥಿತಿ ಯಲ್ಲಿಯೂ ರೋಗ ಮತ್ತು ಸಾವನ್ನು ಆಹ್ವಾನಿಸುತ್ತಲೇ, ಆ ಪುರಾಣ–ಪವಿತ್ರವಾದ ಕೊಳದ ನೀರನ್ನು ಬಳಸುವಿರೋ, ಅಥವಾ ಕಲ್ಲುಮಣ್ಣು ತುಂಬಿ ಒಮ್ಮೆಗೇ ಆ ಕೊಳವನ್ನು ಮುಚ್ಚುವುದು ಕ್ಷೇಮವೆಂದು ಭಾವಿಸುತ್ತೀರೋ ?

**–ಇ.ವಿ. ರಾಮಸ್ವಾಮಿ ನಾಯ್ಕರ್ (ಪೆರಿಯಾರ್)**

ನಾನು ನಮ್ಮ ದೇಶವಾದ ಭಾರತವನ್ನು ಕುರಿತು ತುಂಬ ಹೆಮ್ಮೆಪಡುತ್ತೇನೆ–ಅದಕೆ ಪ್ರಾಚೀನವೂ ವೈಭವೋಪೇತವೂ ಆದ ಪರಂಪರೆಯೊಂದು ಇದೆ ಎಂಬ ಕಾರಣಕ್ಕೆ ಮಾತ್ರವಲ್ಲ,

ಅದು ತನ್ನ ಮನಸ್ಸಿನ ಹಾಗೂ ಆತ್ಮದ ಬಾಗಿಲುಗಳನ್ನು ತೆರೆದು ದೂರದೂರದ ದೇಶಗಳ ಕಡೆಯಿಂದ ಬೀಸಿ ಬರುವ ನೂತನವೂ ಉತ್ಸಾಹಪೂರ್ಣವೂ ಆದ ಗಾಳಿಗಳನ್ನು ಬರಮಾಡಿಕೊಂಡು ತನ್ನೊಳಗೆ ಸೇರಿಸಿಕೊಳ್ಳುವ ಅದ್ಭುತವಾದ ಸಾಮರ್ಥ್ಯವನ್ನು ಪಡೆದಿದೆ ಎಂಬ ಕಾರಣಕ್ಕೂ. ಭಾರತದ ಈ ಸಾಮರ್ಥ್ಯ ದ್ವಿಮುಖವಾದದ್ದು: ಒಂದು, ಶತಶತಮಾನಗಳಿಂದ ಅರಳಿಕೊಂಡ ಅದರದೇ ಆದ ಆಂತರಿಕ ಸಾಂಸ್ಕೃತಿಕ ಸತ್ವ; ಇನ್ನೊಂದು, ಬೇರೆ ಬೇರೆಯ ಮೂಲಗಳಿಂದ ಪಡೆದುಕೊಂಡು, ಅವುಗಳನ್ನು ತನ್ನ ಸಂಸ್ಕೃತಿಯ ಒಂದು ಅಂಗವನ್ನಾಗಿ ಮಾರ್ಪಡಿಸಿಕೊಳ್ಳುವ ಸಾಮರ್ಥ್ಯ. ಇದರಿಂದಾಗಿ ಭಾರತದ ನಿಜವಾದ ಚರಿತ್ರೆಯಲ್ಲಿ ಈ ವಿವಿಧ ಸಂಸ್ಕೃತಿಗಳ ನಿರಂತರವಾದ ಸಮನ್ವಯ ಸಾಧಿತವಾಗಿದೆ ಈ ದೇಶ ಕಾಲದಿಂದ ಕಾಲಕ್ಕೆ ಅನೇಕ ಬಗೆಯ ರಾಜಕೀಯ ಬದಲಾವಣೆಗಳಿಗೆ ಒಳಗಾದರೂ, ಅದರ ಬಹುವರ್ಣಮಯವೂ ಹಾಗೂ ಮೂಲತಃ ಸಂಯುಕ್ತವೂ ಆದ ಸಂಸ್ಕೃತಿಯ ಮೇಲೆ ಅವು ಯಾವ ಪರಿಣಾಮವನ್ನು ಬೀರಲೂ ಸಾಧ್ಯವಾಗಿಲ್ಲ.

ನಮಗೆ ದತ್ತವಾದ ಈ ಪರಂಪರೆಯ ಬಗ್ಗೆ ಮತ್ತು ಈ ಪರಂಪರೆಗೆ, ಬೌದ್ಧಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ತಂದುಕೊಟ್ಟ ನಮ್ಮ ಹಿರಿಯರ ಬಗ್ಗೆ ನನಗೆ ತುಂಬಾ ಹೆಮ್ಮೆ. ನೀವೂ ಇದರಲ್ಲಿ ಪಾಲುದಾರರೆಂಬ, ಉತ್ತರಾಧಿಕಾರಿ ಎಂಬ, ಇದು ನಮ್ಮೆಲ್ಲರಿಗೂ ಸೇರಿದುದೆಂಬ ಭಾವನೆಯಿಂದ ನಿಮಗೆ ಹೆಮ್ಮೆಯಾಗುವುದಿಲ್ಲವೆ ? ಅಥವಾ ಇದನ್ನರಿಯದವರಂತೆ, ಯಾರೋ ಪರಕೀಯರೆಂಬಂತೆ ನಿಮಗೆ ಅನ್ನಿಸುತ್ತದೆಯೆ ? ಇಲ್ಲವೆ, ಇಂಥ ಒಂದು ವಿಪುಲವಾದ ಸಂಪತ್ತಿನ ಉತ್ತರಾಧಿಗಳೂ ಸಂರಕ್ಷರೂ ನಾವೆಂಬ ತಿಳಿವಳಿಕೆಯಿಂದ ನಿಮಗೆ ವಿಚಿತ್ರವಾದ ರೋಮಾಂಚನವಾಗುವುದಿಲ್ಲವೇ ? ನಾನು ನಿಮ್ಮನ್ನು

ಕುರಿತು ಈ ಪ್ರಶ್ನೆಗಳನ್ನು ಕೇಳುತ್ತೇನೆ. ಯಾಕೆಂದರೆ, ಇತ್ತೀಚೆಗೆ ನಮ್ಮ ಜನದ ಮನಸ್ಸನ್ನು ಎತ್ತೆತ್ತಲೋ ತಪ್ಪುದಾರಿಗಳಿಗೆ ಎಳೆಯುವ ಶಕ್ತಿಗಳ ಮೇಲಾಟವನ್ನು ನೋಡುತ್ತಿದ್ದೇವೆ. ಇದರಿಂದ ಚರಿತ್ರೆಯ ಸಹಜಗತಿಗೆ ಅಡೆತಡೆಯುಂಟಾಗುತ್ತದೆ. ನಾವೂ ನೀವೂ, ಹಿಂದೂ ಅಥವಾ ಮುಸ್ಲಿಂ ಅಥವಾ ಇನ್ನಾವುದೇ ಮತಧರ್ಮಗಳಿಗೆ ಸೇರಿದವರಾಗಿರಬಹುದು, ಅಥವಾ ಯಾವುದಕ್ಕೂ ಸೇರದೆಯೇ ಇರಬಹುದು. ಆದರೆ ಅದು ನಮಗೂ ನಿಮಗೂ ಸಮಾನವಾದ ಸಾಂಸ್ಕೃತಿಕ ಪರಂಪರೆ ಯಿಂದ ನಿಮ್ಮನ್ನು ಬೇರ್ಪಡಿಸಲು ಕಾರಣವಾಗಬಾರದು ಯಾಕೆಂದರೆ ಈ ಗತ ಇತಿಹಾಸವೂ ನಮ್ಮನ್ನೆಲ್ಲ ಹಿಡಿದು ಕೂಡಿಸಿರುವ ಸತ್ವವಾಗಿದೆ. ಹೀಗಿರುವಾಗ, ಇಂದಿನ ವರ್ತಮಾನ ವಾಗಲಿ, ನಾಳಿನ ಭವಿಷ್ಯವಾಗಲೀ ಮಾನಸಿಕವಾಗಿ ನಮ್ಮನ್ನು ವಿಭಜನೆ ಮಾಡಲು ಸಾಧ್ಯವಾದೀತೆ ?

**–ಜವಾಹರಲಾಲ್ ನೆಹರೂ**

ಲೋಹವಿದ್ಯೆಯನ್ನು ಬಲ್ಲವರು
ಚಿನ್ನವನ್ನು ಕಾಯಿಸಿ, ಕತ್ತರಿಸಿ, ಒರೆಗಲ್ಲಿಗೆ ಉಜ್ಜಿ
ಹೇಗೆ ಪರೀಕ್ಷಿಸುತ್ತಾರೆಯೋ, ಹಾಗೆ
ನೀವು ನನ್ನ ಮಾತುಗಳನ್ನು ಪರೀಕ್ಷೆಗೆ ಒಳಪಡಿಸಿಯೇ
ಒಪ್ಪಿಕೊಳ್ಳಿರಿ.
ಕೇವಲ ನನ್ನ ಮೇಲಿನ ಗೌರವದಿಂದ ಅಲ್ಲ

**–ಬುದ್ಧ (ಜ್ಞಾನಸಾರ ಸಮುಚ್ಚಯ)**

ನಮಗೊಂದು ಮಹತ್ವದ ಪ್ರಾಚೀನ ಪರಂಪರೆಯಿದೆ ಎಂಬ ಹೆಮ್ಮೆಯು, ನಮ್ಮ ವರ್ತಮಾನದಲ್ಲಿ ನಮ್ಮನ್ನು ನಿಷ್ಕ್ರಿಯಗೊಳಿಸುವ ಒಂದು ಅಪಾಯಕಾರಿಯಾದ ಸಮ್ಮೋಹಕ ಶಕ್ತಿಯಾಗಿ ಪರಿಣಮಿಸಬಾರದು. ಅದರ ಬದಲು, ಉಜ್ವಲವಾದ ಗತಕಾಲದ ಬಗ್ಗೆ ನಮಗಿರುವ ತಿಳಿವಳಿಕೆಯು, ನಾವು ಇನ್ನೂ ಮಹತ್ತಾದುದನ್ನು ಸಾಧಿಸಲು ನಿಜವಾದ ಸ್ಫೂರ್ತಿಯಾಗಬೇಕು ಹಾಗೆಯೆ ವರ್ತಮಾನದ ವಸ್ತುಸ್ಥಿತಿಯ ಬಗ್ಗೆ ನಾವು ತಾಳುವ ವಿಮರ್ಶಾತ್ಮಕ ನಿಲುವುಗಳು ಕೇವಲ ಏಕಪಕ್ಷೀಯವಾಗಿರ ಬಾರದು ಮತ್ತು ಈವರೆಗೆ ನಾವೇನು ಸಾಧಿಸಿದ್ದೇವೆಯೋ ಅವು ಗಳನ್ನು ಮೂರ್ಖತನದಿಂದ ಅಲ್ಲಗಳೆಯುವ ಸ್ವರೂಪದವೂ ಆಗಬಾರದು. ನಾವು ತಾಳುವ ನಿಲುವುಗಳು ಗತವೈಭವಗಳನ್ನು ಕುರಿತ ಸ್ತೋತ್ರಪಾಠವಾಗಲೀ, ನಮ್ಮ ಪತನದ ವೈಭವೀಕರಣ ವಾಗಲಿ ಎರಡೂ ಆಗದೆ ಅಥವಾ ಅವರಿವರ ಚಪ್ಪಾಳೆಗಳಿಗೆ, ನಾವು ಕಟ್ಟಿದ್ದನ್ನು ನಾವೇ ಕೆಡಹುವ ಪ್ರವೃತ್ತಿಯಾಗದೆ, ನಮ್ಮ ದೋಷದೌರ್ಬಲ್ಯಗಳನ್ನೂ, ಅವುಗಳ ಮೂಲಕಾರಣಗಳನ್ನೂ ತಿಳಿದುಕೊಂಡು, ನಮ್ಮ ಸಹಜ ಗುಣ ಹಾಗೂ ಶಕ್ತಿಸಾಮರ್ಥ್ಯ ಗಳ ಮೇಲೆ ನಮ್ಮ ದೃಷ್ಟಿಯನ್ನು ಕೇಂದ್ರೀಕರಿಸುತ್ತ ನಮ್ಮ ಚೈತನ್ಯದ ಅಂತಃಪ್ರೇರಣೆಗಳನ್ನು ನಮ್ಮ ವ್ಯಕ್ತಿತ್ವದ ಪುನರ್ ನವೀಕರಣಕ್ಕೆ ನಾವು ಬಳಸಿಕೊಳ್ಳಬೇಕಾಗಿದೆ.

**–ಮಹರ್ಷಿ ಅರವಿಂದರು**

ಭಾರತವು ತನ್ನ ಗತಕಾಲದ ಎಷ್ಟೋ ಸಂಗತಿಗಳಿಂದ ಹೊರಕ್ಕೆ ಬರಲೇಬೇಕು ಮತ್ತು ಗತಕಾಲವು ನಮ್ಮ ವರ್ತಮಾನದ ಮೇಲೆ ಆಧಿಪತ್ಯವನ್ನು ಸ್ಥಾಪಿಸಲು ನಾವು ಅವಕಾಶ ಕೊಡಬಾರದು. ನಮ್ಮ ಇಂದಿನ ಬದುಕು ಗತಕಾಲದ

ಅರ್ಥಹೀನ ವಿಚಾರಗಳ ಶವಭಾರದಿಂದ ತತ್ತರಿಸುತ್ತಿದೆ. ಯಾವುದು ಮೃತಪ್ರಾಯವೋ ಮತ್ತು ಈಗಾಗಲೇ ತನ್ನ ಉದ್ದೇಶವನ್ನು ಸಾಧಿಸಿದೆಯೋ, ಅದೆಲ್ಲವನ್ನೂ ನಾವು ಕಿತ್ತೆಸೆಯಬೇಕು ......

ಯಾವ ಯಾವುದು ಭಾರತದ ಅರ್ಥವಂತಿಕೆ ಹಾಗೂ ಸೌಂದರ್ಯದ ಮೇಲೆ ಶತಶತಮಾನಗಳ ಧೂಳಿನಂತೆ, ಕೊಳೆಯಂತೆ ಆವರಿಸಿಕೊಂಡಿದೆಯೋ, ಯಾವ ಯಾವುದು ಈ ದೇಶದ ಸತ್ವವನ್ನು ತಿರುಚಿ, ಸ್ತಬ್ಧಗೊಳಿಸಿ ಅದರ ಬೆಳವಣಿಗೆ ಯನ್ನು ಕುಂಠಿತಗೊಳಿಸಿ ದಿಗ್ಬಂಧನದಂತೆ ವರ್ತಿಸುತ್ತಿದೆಯೋ ಅದೆಲ್ಲವನ್ನೂ ಕಿತ್ತೆಸೆದು, ನಮ್ಮ ಪ್ರಾಚೀನ ಋಷಿವಾಣಿಯ ತಿಳಿವಿನಿಂದ ನಮ್ಮ ವರ್ತಮಾನವನ್ನು ನಾವು ಹೊಸದಾಗಿ ರೂಪಿಸಿಕೊಳ್ಳಬೇಕಾಗಿದೆ.

**–ಜವಾಹರಲಾಲ್ ನೆಹರೂ**

ನಾನು ವಿಜ್ಞಾನದ ವಿದ್ಯಾರ್ಥಿ ಯಾವುದನ್ನೂ ಪ್ರಶ್ನೆ ಮಾಡದೆ ಪರೀಕ್ಷೆ ಮಾಡದೆ ಒಪ್ಪುವುದಿಲ್ಲ. ಎಲ್ಲವೂ ಪರೀಕ್ಷೆಗೆ ಸಿಗುತ್ತದೆ ಎಂದು ನಾನು ನಿರೀಕ್ಷಿಸುವುದಿಲ್ಲ; ಪರೀಕ್ಷೆಗೆ ಸಿಗದೆ ಇದ್ದುದನ್ನು 'ಇಲ್ಲ' ಎಂದು ನಾನು ಹೇಳುವುದಿಲ್ಲ; 'ಗೊತ್ತಿಲ್ಲ' ಎಂದು ಹೇಳುತ್ತೇನೆ. ಯಾವುದನ್ನೇ ಆಗಲಿ 'ಇದೆ' ಎಂದು ಹೇಳುವುದಕ್ಕೆ ಆಧಾರ ಬೇಕು. ಅಂತೆಯೆ 'ಇಲ್ಲ' ಎಂದು ಹೇಳುವುದಕ್ಕೂ ಸ್ಪಷ್ಟವಾದ ಮಾಹಿತಿಬೇಕು. ಸತ್ಯಾನ್ವೇಷಣೆಗೆ ಇಂತಹ ವೈಜ್ಞಾನಿಕ ಮನೋಭಾವ ಅತ್ಯಗತ್ಯ

**–ಡಾ.ಎಚ್. ನರಸಿಂಹಯ್ಯ**

ವಿಜ್ಞಾನವು ದೇವರನ್ನು ಕುರಿತ ನಮ್ಮ ಪರಿಕಲ್ಪನೆಗಳನ್ನು ವಿಸ್ತಾರಗೊಳಿಸುತ್ತದೆ ಮತ್ತು ಧರ್ಮ ವಿಜ್ಞಾನವನ್ನು ದಾರಿ ತಪ್ಪದಂತೆ ನಿಯಂತ್ರಿಸುತ್ತದೆ. ಧರ್ಮವು ಸಂಘರ್ಷಗಳಲ್ಲಿ ಮತ್ತು ಚರ್ಚೆಗಳಲ್ಲಿ ಮುಕ್ತಾಯವಾಗಬಾರದು. ಹಾಗೆಯೆ ವಿಜ್ಞಾನವು ಹಿರೋಷಿಮಾ ನಾಗಸಾಕಿಗಳ ದುರಂತದಲ್ಲಿ ಪರ್ಯಾವಸಾನವಾಗಬಾರದು. ಧರ್ಮವನ್ನು ಒಪ್ಪಿಕೊಳ್ಳದ ಮನುಷ್ಯನು ಕಡಿವಾಣವಿಲ್ಲದ ಕುದುರೆಯಂತೆ ಎಂದು ಹೇಳಲಾಗಿದೆ. ನಮ್ಮ ಸ್ವಭಾವಗಳನ್ನು ಪರಿಷ್ಕರಿಸಲು, ದುರಾಸೆಯನ್ನು, ಕಾಠಿಣ್ಯವನ್ನು ಹಾಗೂ ಮೃಗಪ್ರವೃತ್ತಿಯನ್ನು ನಿಯಂತ್ರಿಸಲು ಧರ್ಮದ ಶಿಸ್ತು ನಮಗೆ ಅಗತ್ಯವಾಗಿದೆ. ಧರ್ಮವನ್ನು ಕೇವಲ ಸಂಕುಚಿತವಾದ, ಮತೀಯವಾದ, ಸೈದ್ಧಾಂತಿಕವಾದ ಅರ್ಥದಲ್ಲಿ ವ್ಯಾಖ್ಯಾನಿಸಬಾರದು; ಅದರ ಬದಲು ನಮ್ಮ ಹಿಂದಿನ ಋಷಿಗಳು, ಭಕ್ತರು, ನಾಯನಾರ್‌ರು, ಆಳ್ವಾರರು ಹಾಗೂ ಆಚಾರ್ಯರುಗಳಂತೆ ವಿಶಾಲವಾದ ಅರ್ಥದಲ್ಲಿ ಪರಿ ಭಾವಿಸಬೇಕು. ಅವರು ಹೇಳಿದ್ದೇನೆಂದರೆ: ನಮ್ಮನ್ನು ನಾವು ಮೊದಲು ವ್ಯವಸ್ಥೆಗೊಳಿಸಿಕೊಳ್ಳದೆ ಹೋದರೆ, ಸುವ್ಯವಸ್ಥಿತವಾದ ಸಮಾಜವನ್ನು ನಿರ್ಮಿಸಲಾರೆವು–ಎಂದು.

–ಡಾ.ಎಸ್. ರಾಧಕೃಷ್ಣನ್

ಜೀವನದ ಸಮಸ್ಯೆಗಳನ್ನು ಬಿಡಿಸಲು ವೈಜ್ಞಾನಿಕ ಮನೋಧರ್ಮ ಅಗತ್ಯ ಎನ್ನುತ್ತೇವೆ. ಆ ವೈಜ್ಞಾನಿಕ ಮನೋಧರ್ಮದ ಲಕ್ಷಣಗಳು ಯಾವುವು ? ನನಗೆ ತೋರುವ ಮಟ್ಟಿಗೆ ವೈಜ್ಞಾನಿಕ ಮನೋಧರ್ಮವೆಂದರೆ: ಪ್ರತಿಯೊಂದನ್ನೂ ಪರೀಕ್ಷೆಗೆ ಒಳಗುಪಡಿಸುವುದು; ಪ್ರಯೋಗಗಳ ಮೂಲಕ ಅದರ ತಪ್ಪು-ಸರಿಗಳನ್ನು ಗುರುತಿಸುತ್ತ ಸತ್ಯವನ್ನು ಹುಡುಕುವುದು;

ತಾನು ಕಂಡದ್ದೆ ಸತ್ಯ ಎಂದು ಎಂದೂ ಪ್ರತಿಪಾದಿಸದಿರುವುದು; ಆದರೆ ಅದು ಯಾಕೆ ಹಾಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವುದು; ಮತ್ತು ತನಗೆ ಸಮ್ಮತ ವೆಂದು ಕಂಡ ನಂತರ ಒಪ್ಪಿಕೊಳ್ಳುವುದು; ಅನಂತರ ಬೇರೊಂದು ತಕ್ಕ ಆಧಾರ ದೊರೆತರೆ, ಮೊದಲು ತಾನು ಒಪ್ಪಿಕೊಂಡ ಅಭಿಪ್ರಾಯಗಳನ್ನು ಬದಲಾಯಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವುದು; ಎಲ್ಲ ವಿಚಾರದಲ್ಲೂ ತೆರೆದ ಮನಸ್ಸನ್ನಿರಿಸಿ ಕೊಳ್ಳುವುದು; ಎಲ್ಲಿ ಯಾವುದು ಸತ್ಯವೆಂದು ಕಂಡರೂ ಅದನ್ನು ಗುರುತಿಸಿ ಗ್ರಹಿಸುವುದು. ಇದು ಸಂಸ್ಕೃತಿ ಎನ್ನುವುದಾದರೆ, ಇವತ್ತಿನ ಜಗತ್ತಿನಲ್ಲಿ ಹಾಗೂ ರಾಷ್ಟ್ರಜೀವನದಲ್ಲಿ ಇದು ಎಷ್ಟರ ಮಟ್ಟಿಗೆ ಪ್ರತಿನಿಧಿತವಾಗಿದೆ ? ಒಂದು ವೇಳೆ ಅದು ನಿಜ ವಾಗಿಯೂ ಪ್ರತಿನಿಧಿತವಾಗಿದ್ದರೆ, ನಮ್ಮ ಎಷ್ಟೋ ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಸಮಸ್ಯೆಗಳನ್ನು ನಾವು ಬಿಡಿಸುವುದು ಎಷ್ಟೊಂದು ಸುಲಭವಾಗಬಹುದಾಗಿತ್ತು !

**–ಜವಾಹರಲಾಲ್ ನೆಹರೂ**

ಹೊಸಚಿಗುರು ಹಳೆಬೇರು ಕೂಡಿರಲು ಮರ ಸೊಬಗು
ಹೊಸಯುಕ್ತಿ ಹಳೆತತ್ವದೊಡಗೂಡೆ ಧರ್ಮ
ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನಜೀವನಕೆ–ಮಂಕುತಿಮ್ಮ

**–ಡಿ.ವಿ.ಜಿ.**

ವೇದಶಾಸ್ತ್ರ ಪುರಾಣ ಆಗಮಂಗಳೆಂಬ
ಕೊಟ್ಟಣವ ಕುಟ್ಟುತ್ತ, ನುಚ್ಚು ತೌಡು ಕಾಣೆ ಭೋ,
ಅವ ಕುಟ್ಟಲೇಕೆ ?
ಅತ್ತಲಿತ್ತ ಹರಿವ ಮನದ ಶಿರವನರಿಯಬಲ್ಲಡೆ
ಬಚ್ಚ ಬರಿಯ ಬಯಲು–ಚೆನ್ನಮಲ್ಲಿಕಾರ್ಜುನಾ

**–ಅಕ್ಕಮಹಾದೇವಿ**

ಬೇಕಾದಷ್ಟು ಮಂದಿ ಪಂಡಿತರು ಸಿಕ್ಕುತ್ತಾರೆ–ಜ್ಞಾನದ ಸಂಬಂಧವಾಗಿ ಮಾತನಾಡತಕ್ಕವರು. ಬಾಯಲ್ಲೇನೋ ಹೇಳುತ್ತಾರೆ, ಕಾರ್ಯತಃ ಏನೆಂದರೆ ಏನೂ ಇಲ್ಲ. ರಣಹದ್ದೇನೋ ಬಹಳ ಎತ್ತರಕ್ಕೆ ಹಾರಿ ಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಸತ್ತ ಪ್ರಾಣಿಗಳ ಕಡೆಗೇ. ಇವರೂ ಹಾಗೆಯೆ.

**–ಶ್ರೀರಾಮಕೃಷ್ಣ ಪರಮಹಂಸ**

ನಿನಗೆ ಬೇಕಾಗಿರೋದು ಮಾವಿನ ಹಣ್ಣು. ತೋಟದಲ್ಲಿ ಎಷ್ಟು ನೂರು ಮರಗಳಿವೆ, ಎಷ್ಟು ಸಾವಿರ ಕೊಂಬೆಗಳಿವೆ, ಎಷ್ಟು ಲಕ್ಷ–ಎಷ್ಟು ಕೋಟಿ ಎಲೆಗಳಿವೆ ಇವೇ ಮೊಲಾದವುಗಳ ವೃತ್ತಾಂತ ನಿನಗೇಕೆ ? ... ಮಾವಿನ ಹಣ್ಣು ತಿನ್ನೋಕೆ ಬಂದೆ. ಅದನ್ನು ತಿಂದು ಹೋಗು.

**–ಶ್ರೀ ರಾಮಕೃಷ್ಣ ಪರಮಹಂಸ**

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?
ಎಂದೊ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು ?
ನಿನ್ನೆದೆಯ ದನಿಯೆ ಋಷಿ ! ಮನು ನಿನಗೆ ನೀನು.

.....................................................................

ಹಿಂದಿನಾ ಋಷಿಗಳೂ ಮಾನವರೆ ನಮ್ಮಂತೆ,
ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ:
ಕಾಲಕ್ಕೆ ತಕ್ಕಂತೆ, ದೇಶಕ್ಕೆ ತಕ್ಕಂತೆ
ನಮ್ಮ ಹೃದಯವೆ ನಮಗೆ ಶ್ರೀಧರ್ಮಸೂತ್ರ !

– **ಕುವೆಂಪು**

## — ೩ —

ಸತ್ಯ ಒಂದೇ; ತಿಳಿದವರು ಅದನ್ನು ಹಲವು
ಹೆಸರುಗಳಿಂದ ಕರೆಯುತ್ತಾರೆ.

**– ಋಗ್ವೇದ**

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ
ಅವರವರ ಭಾವಕ್ಕೆ
ಅವರವರ ಪೂಜೆಗೆ
ಅವರವರಿಗೆಲ್ಲ ದೇವ ನೀನೊಬ್ಬನೇ

**– ಮುಪ್ಪಿನ ಷಡಕ್ಷರಿ**

ಭಿನ್ನಭಿನ್ನವಾದ ಪ್ರದೇಶಗಳಲ್ಲಿ ಜನಿಸಿದ
ಭಿನ್ನಭಿನ್ನವಾದ ನದಿಗಳೆಲ್ಲವೂ ಕಟ್ಟಕಡೆಗೆ
ಹೇಗೆ ಕಡಲನ್ನೇ ಸೇರುತ್ತವೆಯೋ ಹಾಗೆ,
ವಿವಿಧ ಭಾವಜನ್ಯವಾದ ಮಾರ್ಗಗಳು
ಬೇರೆಬೇರೆಯಾಗಿ ತೋರಿದರೂ
ಋಜುಕುಟಿಲಪಥಗಳಾಗಿ ಕಂಡುಬಂದರೂ
ಕಟ್ಟಕಡೆಗೆ (ಪರಮಾತ್ಮನಾದ) ನಿನ್ನನ್ನೆ ಸೇರುತ್ತವೆ.

**– ಶಿವಮಹಿಮ್ನಸ್ತೋತ್ರ**
**(ಪುಷ್ಪದಂತ)**

ದೇವರುಗಳೆಷ್ಟು ?
ಒಬ್ಬನೇ.
ಭಾವಿಸುವ ಮನಸ್ಸು ಮಾತ್ರ ಅನಂತ,
ಆದ ಕಾರಣ ದೇವರೂ ಅನಂತವೇ !

**–ಬೃಹದಾರಣ್ಯಕ**

ದೇವರು ಏನ್ನುವುದು, ನಾವು ಇದೆ ಎಂದು ಭಾವಿಸುವ, ಆದರೆ ನಾವು ತಿಳಿಯದ, ಹೀಗೆ ಎಂದು ಹೇಳಲಾಗದ ಏನೋ ಒಂದು. ನನ್ನ ಪಾಲಿಗೆ ದೇವರೆಂದರೆ ಸತ್ಯ ಹಾಗೂ ಪ್ರೇಮ, ನೀತಿ ಮತ್ತು ಧರ್ಮ ದೇವರೆಂದರೆ, ನಿರ್ಭಯತೆ; ಎಲ್ಲ ಬೆಳಕಿನ ಮೂಲ ಹಾಗೂ ಜೀವ; ಆದರೂ ಈ ಎಲ್ಲವನ್ನೂ ಮೀರಿದ್ದು ಮತ್ತು ಅದರಾಚೆಯದು. ದೇವರೆಂದರೆ ಪ್ರಜ್ಞೆ. ಆಸ್ತಿಕವಾದವೂ ದೇವರೆ, ನಾಸ್ತಿಕವಾದವೂ ದೇವರೆ. ದೇವರು ಮಾತು–ಮನಸ್ಸುಗಳಿಂದ ಆಚೆಯದು. ಆದರೂ ಯಾರಿಗೆ ಅಗತ್ಯವೋ, ಅವರಿಗೆ ದೇವರು ಅವರ ಇಷ್ಟ ದೈವ. ದೇವರೆಂಬುದೊಂದು ಶುದ್ಧಸತ್ವ. ಯಾರಿಗೆ ಶ್ರದ್ಧೆಯಿದೆಯೋ ಅವರ ಪಾಲಿಗೆ ದೇವರು ನಿಜವಾಗಿಯೂ ಇದ್ದಾನೆ. ದೇವರು ಪ್ರಶಾಂತ, ಹಾಗೆಯೇ ರೌದ್ರನೂ ಕೂಡ. ಜಗತ್ತು ಬಲ್ಲ ನಿಜವಾದ ಪ್ರಜಾಪ್ರಭುತ್ವವಾದಿ ದೇವರು, ಹಾಗೆಯೆ ಅತ್ಯಂತ ದೊಡ್ಡ ಸರ್ವಾಧಿಕಾರಿಯೂ ಅವನೇ. ಒಂದರ್ಥದಲ್ಲಿ ನಾವೆಲ್ಲ ಇದ್ದೂ ಇಲ್ಲ. ಆದರೆ ನಿಜವಾಗಿಯೂ ಇರುವವನು ಅವನೊಬ್ಬನೇ.

**–ಮಹಾತ್ಮಾ ಗಾಂಧೀ**

ಪೂರ್ವವೂ ಪಶ್ಚಿಮವೂ ಅಲ್ಲಾಹನವು
ನೀನೆತ್ತ ತಿರುಗಿದರೂ ಅತ್ತ ಕಡೆ ಇರುವುದು
ಅಲ್ಲಾಹನ ಮುಖವೇ

– ಕುರ್‌ಆನ್

ಅಲ್ಲಾಹನು ನಿಮ್ಮ ಜತೆಗಿದ್ದರೆ
ನಿಮ್ಮನ್ನು ಜಯಿಸಬಲ್ಲವರು ಯಾರು ?
ಅಲ್ಲಾಹನೆ ನಿಮ್ಮ ಕೈ ಬಿಟ್ಟರೆ
ನಿಮ್ಮ ನೆರವಿಗೆ ನಿಲ್ಲುವರು ಯಾರು ?

– ಕುರ್‌ಆನ್

ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ
ಅಂತರ್‌ದೃಷ್ಟಿಯ ಪ್ರಕಾಶಗಳು ಇಳಿದುಬಂದಿವೆ.
ಈಗ ಚೆನ್ನಾಗಿ ವೀಕ್ಷಿಸುವವನು
ತನಗೇ ತಾನೇ ಹಿತವನ್ನು ಮಾಡಿಕೊಳ್ಳುವನು.
ಕಣ್ಣು ಮುಚ್ಚಿಕೊಂಡವನು
ಸ್ವತಃ ನಷ್ಟವನ್ನು ಹೊಂದುವನು.

– ಕುರ್‌ಆನ್

ಅಲ್ಲಾಹನ ಹೊರತು ಬೇರೆಯ ದೇವನಿಲ್ಲ;
ಅವನು ಅಚಲನು, ಅಖಿಲ ಜೀವಜಾತ
ನಿಯಂತ್ರಕನು.
ನಿದ್ರೆ ಆಲಸ್ಯಗಳಿಗೆ ಅತೀತನು
ಈ ಭೂಮಿಯ ಮೇಲೆ ಮತ್ತು ಆಕಾಶದಲ್ಲಿ
ಏನೇನಿದೆಯೋ
ಅದೆಲ್ಲವೂ ಅವನದು.

**–ಕುರ್‌ಆನ್**

ಒಬ್ಬನಲ್ಲದೆ ಜಗಕೆ
ಇಬ್ಬರುಂಟೇ ಮತ್ತೆ?
ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ
ಒಬ್ಬನೇ ದೈವ–ಸರ್ವಜ್ಞ

**–ಸರ್ವಜ್ಞ**

ನಿಮ್ಮ ದೇವನು ಏಕೈಕ ದೇವ
ದಯಾಮಯನೂ ಕರುಣಾನಿಧಿಯೂ ಆದ
ಆ ದೇವನ ಹೊರತು
ಬೇರೊಬ್ಬ ದೇವನಿಲ್ಲ.

**–ಕುರ್‌ಆನ್**

ಸೃಷ್ಟಿಕರ್ತನಾದ ಆ ದೇವರು
ತನ್ನ ಸೃಷ್ಟಿಯಲ್ಲಿಯೇ ಇದ್ದಾನೆ;
ಮತ್ತು ಈ ಸೃಷ್ಟಿಯು ಅವನೊಳಗೇ ಇದೆ.

**–ಗುರುಗೋವಿಂದ್ ಸಿಂಗ್**

ಇರುಳಿನ ಅಂಧಕಾರದಲ್ಲಿಯೂ, ಹಗಲಿನ
ಪ್ರಕಾಶದಲ್ಲಿಯೂ, ಇರುವುದೆಲ್ಲವೂ ಅಲ್ಲಾಹನದೇ.
ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

**–ಕುರ್‌ಆನ್**

ಇಬ್ಬರು ಮೂವರು ದೇವರೆಂದು
ಉಬ್ಬುಬ್ಬಿ ಮಾತನಾಡಬೇಡ
ಒಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ ನೋಡಾ

**–ಬಸವಣ್ಣ**

ಸೋದರರೇ,
ಇಬ್ಬರು ದೇವರು ಎಲ್ಲಿಂದ ಬಂದರು ?
ಯಾರು ನಿಮ್ಮನ್ನು ಈ ಭ್ರಮೆಯಲ್ಲಿ ಕೆಡವಿದವರು ?
ಒಬ್ಬನಾದ ಅವನೇ, ಅಲ್ಲಾ, ರಾಮ, ಕೃಷ್ಣ, ಕರೀಮ
ಎಂಬ ಹೆಸರನ್ನು ಧರಿಸಿದವನು.
ಚಿನ್ನ ಮಾತ್ರ ಒಂದೇ; ಆದರೆ ಆಭರಣಗಳು ಮಾತ್ರ ಬೇರೆ
ಬೇರೆ.

**–ಕಬೀರ**

ನಮ್ಮ ರಾಮು, ರಹೀಮು, ಕರೀಮು, ಕೇಶವ,
ಅಲ್ಲಾ ಎಲ್ಲರೂ ಒಂದೇ.
ಬಿಸ್ಮಿಲ್ಲಾ ವಿಶ್ವಂಭರಾ ಇಬ್ಬರೂ ಒಂದೇ.
ಕಾಜಿ, ಮುಲ್ಲಾ, ಪೀರ, ಪೈಗಂಬರರು,
ರೋಜಾ ಮಾಡುವರು

ಪಶ್ಚಿಮ ದಿಕ್ಕಿಗೆ ಮುಖ ಮಾಡಿ ನಮಾಜು ಮಾಡುವರು,
ಬ್ರಾಹ್ಮಣರು ಪೂರ್ವದಿಕ್ಕಿಗೆ ಮುಖ ಮಾಡಿ ಪೂಜಿಸುವರು,
ಏಕಾದಶಿವ್ರತ, ಗಂಗಾಸ್ನಾನಗಳಲ್ಲಿ ತೊಡಗುವರು,
ಮುಸ್ಲಿಮರು ಮಸೀದಿಯಲ್ಲಿ, ಹಿಂದೂಗಳು ಗುಡಿಗಳಲ್ಲಿ,
ಖುದಾ–ರಾಮರನ್ನು ಭಜಿಸುವರು.
ಎಲ್ಲಿ ಮಸೀದಿ ಹಾಗೂ ದೇವಾಲಯಗಳಿಲ್ಲವೋ
ಅಲ್ಲಿ ಯಾವ ದೇವರು ?

–**ಕಬೀರ**

ಒಂದೇ ಬೆಂಕಿಯ ಕುಂಡದಿಂದ ಅಸಂಖ್ಯವಾದ ಬೆಂಕಿಯ ಕಿಡಿಗಳು ಹೊಮ್ಮುತ್ತವೆ, ಮತ್ತೆ ಅದರೊಳಗೇ ಲಯವಾಗುತ್ತವೆ. ಎದ್ದ ಧೂಳಿನಿಂದ ಅಸಂಖ್ಯವಾದ ಧೂಳಿನ ಕಣಗಳು ಏಳುತ್ತವೆ ಮತ್ತೆ ಅದೇ ಮಣ್ಣಿನಲ್ಲಿ ಬೆರೆಯುತ್ತವೆ. ಒಂದೇ ಕಡಲಿನಿಂದ ಅಸಂಖ್ಯ ಅಲೆಗಳು ಏಳುತ್ತವೆ ಮತ್ತೆ ಅದರಲ್ಲಿಯೇ ಲಯವಾಗುತ್ತವೆ.

ಹಾಗೆಯೇ, ಅವನಿಂದ ಎಲ್ಲ ರೂಪಗಳೂ – ಚೇತನಾಚೇತನಗಳೂ ಹೊಮ್ಮುತ್ತವೆ ಹಾಗೂ ಆತನಲ್ಲಿಯೆ ಲಯವಾಗುತ್ತವೆ.

–**ಗುರುಗೋವಿಂದ ಸಿಂಗ್**

ಸಮುದ್ರದೊಳಗಿನ ತರಂಗಗಳು ಸಮುದ್ರವೇ,
ಸಮುದ್ರ ಮತ್ತು ತರಂಗಗಳು ಭಿನ್ನವೇನು ?
ತರಂಗಗಳೂ ಎದ್ದಾಗಲೂ ನೀರೇ, ಅವು ಬಿದ್ದಾಗಲೂ ನೀರೇ.
ತರಂಗವನ್ನು ಬೇರೆಯ ಹೆಸರಿನಿಂದ ಕರೆದ ಮಾತ್ರಕ್ಕೆ
ಅದು ನೀರಲ್ಲದೆ ಬೇರೆಯಾದೀತೆ ?

**–ಕಬೀರ**

ಕಲ್ಲೊಳಗೆ ಮಣ್ಣೊಳಗೆ
ನುಣ್ಣನೆಯ ಶಿಲೆಯೊಳಗೆ
ಬಣ್ಣಿಸಿ ಬರೆದ ಪಟದೊಳಗೆ ಇರುವಾತ
ನಿನ್ನಲ್ಲಿ ಇರನೆ ?–ಸರ್ವಜ್ಞ

**–ಸರ್ವಜ್ಞ**

ಎಲ್ಲರ ಹೃದಯದ ಅಂತರಾಳದಲ್ಲಿ
ನುಡಿಯುವವನು ಆ ಭಗವಂತನೇ.
ಒಂದೇ ಮಣ್ಣಿನಿಂದ ಇರುವೆಯನ್ನೂ, ಆನೆಯನ್ನೂ
ಬಗೆಬಗೆಯ ಪಾತ್ರಗಳನ್ನು ರೂಪಿಸಿದವನು ಅವನೇ.
ಸಸ್ಯಗಳಲ್ಲಿ, ಪ್ರಾಣಿಗಳಲ್ಲಿ, ಹೊಟ್ಟೆ ಹೊಸೆದು ಚಲಿಸುವ
ಜಂತುಗಳಲ್ಲಿ, ಹಾರಾಡುವ ಜೀವಗಳಲ್ಲಿ
ಇರುವವನು ಆ ಪರಮಾತ್ಮನೊಬ್ಬನೇ.

**–ಗುರುಗೋವಿಂದ ಸಿಂಗ್**

ದೇವರು ಒಬ್ಬನೇ:
ನಿತ್ಯ ಸತ್ಯ ಎಂಬುದು ಆತನ ಹೆಸರು.
ಅವನು ಸಚರಾಚರಗಳನ್ನು ನಿರ್ಮಿಸಿದವನು
ಯಾರಿಗೂ ಹೆದರದ ಹಾಗೂ ಯಾರಿಗೂ ಹಗೆಯಾಗದ
ಕಾಲಾತೀತನಾದದ್ದು ಆತನ ಮೂರ್ತಿ
ಅಭವನಾದ, ತಾನೇತಾನಾದ ಆತ
ಗುರುಕೃಪೆಯಿಂದ ಭಕ್ತರಿಗೆ ಗೋಚರನಾಗುತ್ತಾನೆ.

**–ನಾನಕ್**

ಮನುಷ್ಯತ್ವದ ಮಹಿಮೆಯನ್ನು ಎಂದಿಗೂ ಮರೆಯಬೇಡ.
ನಮಗಿಂತಲೂ ಬೇರೆಯಾದ ದೇವರು
ಹಿಂದಿರಲಿಲ್ಲ. ಮುಂದೆ ಬರುವುದಿಲ್ಲ.
ಕ್ರಿಸ್ತ, ಬುದ್ಧ, ಕೃಷ್ಣ ರಾಮರೆಲ್ಲ
'ಅಹಮಸ್ಮಿ'–ಎಂಬ ಮಹಾವಾರಿಧಿಯ
ತರಂಗ ಮಾತ್ರಗಳು

**–ಸ್ವಾಮಿ ವಿವೇಕಾನಂದ**

ಎಲ್ಲ ಆತ್ಮಗಳೂ ಸಮಾನವಾಗಿವೆ. ಅವುಗಳಲ್ಲಿ ಒಂದು
ದೊಡ್ಡದು ಮತ್ತೊಂದು ಸಣ್ಣದು, ಎಂಬ ವ್ಯತ್ಯಾಸಗಳಿಲ್ಲ.

**–ಮಹಾವೀರ**

ಭಗವಂತನೆಂಬ ಯಾವ ಒಂದು ಪ್ರತ್ಯೇಕವಾದ
ಸ್ಥಿತಿಯೂ ಇಲ್ಲ.
ಒಂದು ವೇಳೆ ಸರ್ವವಿಧಾನದಿಂದಲೂ
ಪುರುಷಾರ್ಥವನ್ನು ಆಚರಿಸಿದ್ದೇ ಆದರೆ,
ಪ್ರತಿಯೊಂದು ಜೀವವೂ ದೇವನಾಗಲು ಸಾಧ್ಯವಿದೆ.

**–ಮಹಾವೀರ**

ಮೋಕ್ಷದ ಬಾಗಿಲು ಎಲ್ಲರಿಗೂ ತೆರೆದಿದೆ.
ಅಲ್ಲಿಗೆ ಹೋಗಲು, ಶ್ರವಣ, ಶ್ರಾವಕ,
ಬ್ರಾಹ್ಮಣ, ಶೂದ್ರ, ಶ್ರೀಮಂತ, ಬಡವ
ಎಂಬ ಹಕ್ಕುಬಟ್ಟೆಗಳು ಬೇಕಾಗಿಲ್ಲ.

**–ಮಹಾವೀರ**

ನಮ್ಮ ಬದುಕೇ ನಮ್ಮ ಭಾವನೆಗಳಿಗೆ ಅಡಿಗಲ್ಲು. ನಮ್ಮ (ಕಲ್ಪನೆಯ) ದೇವರು ನಮ್ಮ ಭಾವನೆಗಳಲ್ಲಿ ದೊಡ್ಡವನಾಗುವುದಕ್ಕೆ, ಜೀವನ ದೊಡ್ಡದಾಗಬೇಕು. ಎಷ್ಟು ಸವಿಯಾದ, ಸವಿಸ್ತಾರವಾದ ಜೀವನದ ಹಿನ್ನೆಲೆಯು ನಮಗಿರುತ್ತದೋ, ಅಷ್ಟು ವಿಸ್ತಾರವಾದ ದೇವರು ನಮಗೆ ಇದಿರಾಗುತ್ತಾನೆ... ನಮ್ಮ ಜೀವನದಿಂದಲೇ ದೇವರು ಉದ್ಭವಿಸಬೇಕು, ಬೆಳೆಯಬೇಕು, ಹಿರಿಯನಾಗಬೇಕು. ಎಷ್ಟು ಎಷ್ಟು ಜೀವನ ಹಿರಿಯದೋ ಅಷ್ಟು ಅಷ್ಟು ದೇವರು ಹಿರಿಯದು.

**–ಶಿವರಾಮ ಕಾರಂತ**

ಮನುಷ್ಯನ ಪರಮ ಗುರಿ ದೈವದ ಸಾಕ್ಷಾತ್ಕಾರ ಆದ ಕಾರಣ ಅವನ ಎಲ್ಲ ಚಟುವಟಿಕೆಗಳೂ–ಅವು ಸಾಮಾಜಿಕವಾಗಿರಲಿ, ರಾಜಕೀಯವಾಗಿರಲಿ, ಧಾರ್ಮಿಕವಾಗಿರಲಿ ಈ ಒಂದು ಉದ್ದೇಶದಿಂದ ನಿರ್ದೇಶಿತವಾಗಬೇಕಾದವು ಈ ಪ್ರಯತ್ನದ ಮೊದಲ ಅಗತ್ಯವೆಂದರೆ, ಮಾನವರೆಲ್ಲರ ಸೇವೆ ಮಾಡುವುದು. ಯಾಕೆಂದರೆ ದೇವರನ್ನು ಕಾಣಲು ಇರುವ ಒಂದೇ ಮಾರ್ಗವೆಂದರೆ ಆತನನ್ನು ಆತನ ಸೃಷ್ಟಿಯಲ್ಲಿಯೇ ಗುರುತಿಸುವುದು, ಹಾಗೂ ಆ ಸೃಷ್ಟಿಯೊಂದಿಗೆ ಬೆರೆಯುವುದು. ನಾನು ಈ ಅಖಂಡ ಜಗತ್ತಿನ ಒಂದು ಭಾಗವಾಗಿದ್ದೇನೆ. ಆದ ಕಾರಣ, ನಾನು ನನ್ನ ಸಹಜೀವಿಗಳಿಂದಾಚೆ, ದೇವರನ್ನು ಕಾಣಲಾರೆ. ನನ್ನ ದೇಶ ಬಾಂಧವರೇ ನನ್ನ ಜತೆಯವರು. ಅವರು ಅಸಹಾಯಕರಾಗಿದ್ದಾರೆ, ನಿರ್ಗತಿಕರಾಗಿದ್ದಾರೆ, ಜಡವಾಗಿದ್ದಾರೆ. ಅವರ ಸೇವೆಗೆ ನನ್ನನ್ನು ನಾನು ಮೀಸಲಿಡಬೇಕು. ಕೇವಲ ದೇವರನ್ನು ಕಾಣಬೇಕೆಂಬುದೇ ನನ್ನ ಮಹದಾಸೆಯಾಗಿದ್ದರೆ, ಅವನನ್ನು ಹುಡುಕಿಕೊಂಡು ಹಿಮಾಲಯದ ಗುಹೆಗಳಿಗೂ ಹೋದೇನು.

ಆದರೆ ನನಗೆ ಗೊತ್ತು: ನಾನು ದೇವರನ್ನು ನನ್ನ ಜನತೆಯಲ್ಲಲ್ಲದೆ ಬೇರೆಲ್ಲೂ ಕಾಣಲಾರೆ.

**–ಮಹಾತ್ಮಾ ಗಾಂಧೀ**

ಸರ್ವಸ್ತೋತ್ರಗಳೂ,
ಈ ಭೂಮಿ ಆಕಾಶಗಳನ್ನು ಸೃಷ್ಟಿಸಿದ
ಅಂಧಕಾರವನ್ನೂ ಪ್ರಕಾಶವನ್ನೂ ಉಂಟುಮಾಡಿದ
ಆ ಅಲ್ಲಾಹನಿಗೇ ಮೀಸಲು.

**–ದಿವ್ಯ ಕುರಾನ್**

'ಒಂದು ವೇಳೆ ದೇವರು ಇಲ್ಲದೆ ಹೋದರೂ, ನಾವು ದೇವರೊಬ್ಬನನ್ನು ಆವಿಷ್ಕಾರ ಮಾಡುವುದು ಅಗತ್ಯವಾಗಿದೆ' ಎಂದು ವಾಲ್ಟೇರ್ ಹೇಳಿದ. ಬಹುಶಃ ಅದು ಸರಿ. ಹಾಗೆ ನೋಡಿದರೆ ಮನುಷ್ಯನ ಮನಸ್ಸು ಯಾವಾಗಲೂ, ಇಂಥದೊಂದು ಕಲ್ಪನೆಯನ್ನೂ ಭಾವನೆಯನ್ನೂ ಕಟ್ಟಿಕೊಳ್ಳಲು ಹವಣಿಸುತ್ತಿದೆ ಹಾಗೂ ಮನುಷ್ಯನ ಮನಸ್ಸಿನ ಬೆಳವಣಿಗೆಯೊಂದಿಗೇ ಈ ದೈವತ್ವದ ಕಲ್ಪನೆಯೂ ಬೆಳೆದು ಬಂದಿದೆ ಆದರೆ ಇದಕ್ಕೆ ಪ್ರತಿಯಾದ ಪ್ರಸ್ತಾಪವೂ ಒಂದಿದೆ: ಅದೇನೆಂದರೆ, ಒಂದು ವೇಳೆ ದೇವರು ನಿಜವಾಗಿಯೂ ಇರುವುದೇ ಆದರೆ, ಅಂಥ ದೇವರನ್ನು, ಅವಲಂಬಿಸದೆ ನಿಲ್ಲುವಂಥ ಮನಃಸ್ಥಿತಿಯೊಂದು ತೀರ ಅಪೇಕ್ಷಣೀಯವಾದುದಲ್ಲವೆ ? ಅತಿಮಾನುಷ ಶಕ್ತಿಗಳ ಮೇಲೆ ಅವಲಂಬಿಸುವುದೂ, ಅನೇಕ ವೇಳೆ ಮನುಷ್ಯನ ಸ್ವಾವಲಂಬನ ಪ್ರವೃತ್ತಿ ಹಾಗೂ ಸೃಜನಶೀಲತೆಗಳಿಗೆ ಮಾರಕವಾದದ್ದು.

**–ಜವಾಹರಲಾಲ್ ನೆಹರೂ**

ಆಕಾಶದಿಂದ ಬಿದ್ದ ನೀರು
ಸಮುದ್ರದ ಕಡೆಗೆ ಹೇಗೆ ಹೋಗುತ್ತದೆಯೋ ಹಾಗೆ
ಯಾವ ದೇವರಿಗೆ ನಮಸ್ಕರಿಸಿದರೂ
ಅದು ಕೇಶವನಿಗೇ ಸಲ್ಲುತ್ತದೆ.

**–ಲೋಕೋಕ್ತಿ**

ಹೌದಪ್ಪ ಹೌದೋ ನೀನೇ ದೇವರಾ
ನಿಂದ ನೀ ತಿಳಿದರ ನಿನಗಿಲ್ಲೋ ದೂರಾ
ನೀರಿಲ್ಲದ ಜಳಕಾ ಮಾಡಿರಬೇಕೋ
ಅರಿವೆಯಿಲ್ಲದ ಮಡಿಯ ಉಟ್ಟಿರಬೇಕೋ
ಊಟಯಿಲ್ಲದೆ ಹೊಟ್ಟೆ ತುಂಬಿರಬೇಕೋ
ನಿದ್ದಿಯೊಳಗೆ ಸದಾ ಎಚ್ಚರವಿರಬೇಕೋ
ತಂಬಾಕಿಲ್ಲದ ಬತ್ತಿ ಎಳೆ ಸೇದಿರಬೇಕೋ

**–ಶಿಶುನಾಳ ಷರೀಫ**

ಯಾರನ್ನು ಶೈವರು ಶಿವ ಎಂದೂ, ವೇದಾಂತಿಗಳು
ಬ್ರಹ್ಮ ಎಂದೂ,
ಬೌದ್ಧರು ಬುದ್ಧ ಎಂದೂ, ವಿಚಾರಪಟುಗಳಾದ
ನೈಯಾಯಿಕರು
ಕರ್ತೃ ಎಂದೂ, ಜೈನಧರ್ಮದವರು ಅರ್ಹತ್ ಎಂದೂ,
ಮೀಮಾಂಸಕರು ಕರ್ಮ ಎಂದೂ,
ಉಪಾಸನೆ ಮಾಡುತ್ತಾರೆಯೋ
ಆ ತ್ರೈಲೋಕ್ಯನಾಥನಾದ ಹರಿಯು
ನಿಮಗೆ ಇಷ್ಟಫಲಗಳನ್ನು ನೀಡಲಿ.

**–ಬೇಲೂರು ಶಾಸನ**

— ೪ —

ಆ ದಯಾಮಯನು ವಿಶ್ವ ಸಿಂಹಾಸನದ ಮೇಲೆ
ವಿರಾಜಿಸುತ್ತಿದ್ದಾನೆ.
ಅವನು ಆಕಾಶಗಳಲ್ಲಿಯೂ, ಭೂಮಿಯ ಮೇಲೂ,
ಮತ್ತು ಭೂವ್ಯೋಮಾಕಾಶಗಳ ನಡುವೆಯೂ
ಪಾತಾಳದಲ್ಲಿಯೂ ಇರುವ ವಸ್ತುಗಳ ಒಡೆಯನಾಗಿದ್ದಾನೆ.
ನೀವು ನಿಮ್ಮ ಮಾತನ್ನು ಉಚ್ಚಸ್ವರದಲ್ಲಿ ಹೇಳಿದರೂ
ಅವನು ನಿಮ್ಮ ಪಿಸು ಮಾತನ್ನು ಮಾತ್ರವಲ್ಲ
ಅದಕ್ಕಿಂತಲೂ ಗುಟ್ಟಾದ ಮಾತನ್ನು ಅರಿತುಕೊಳ್ಳುತ್ತಾನೆ.

– ಕುರ್ ಆನ್

ಭಗವಂತನನ್ನು ನೀನು ಮೂರ್ತಿಯನ್ನಾಗಿ ಮಾಡಿ
ಸ್ಥಾಪಿಸಲಾರೆ.
ಅಥವಾ ನಿನ್ನ ಮಾನವಾಕೃತಿಯಲ್ಲಿ ರೂಪಿಸಲಾರೆ.
ಅವನು ತನ್ನಿಂದ ತಾನೇ ತಾನಾಗಿ
ಯಾವ ಕುಂದು–ಕಲೆಗಳೂ ತಾಗದ ಎತ್ತರದಲ್ಲಿ ನಿಂತವನು.
ಅವನ ಮಂದಿರದಲ್ಲಿ ಕೂತು, ಅವನನ್ನು ಕುರಿತು
ಧ್ಯಾನಿಸುವವರೇ ಪೂಜ್ಯರು.

– ನಾನಕ

ಕರುಣೆಯೇ ನಿನ್ನ ಮಸೀದಿಯಾಗಲಿ
ಶ್ರದ್ಧೆಯೇ ನಿನ್ನ ಪ್ರಾರ್ಥನೆಯ ಪೀಠವಾಗಲಿ
ಪ್ರಾಮಾಣಿಕವಾದ ಜೀವನವೇ ನಿನ್ನ ಕುರ್‌ಆನ್ ಆಗಲಿ
ವಿನಯಶೀಲತೆಯೇ ನಿನ್ನ ಆಚಾರವಾಗಲಿ
ಭಕ್ತಿ ಭಾವಗಳೇ ನಿನ್ನ ಉಪವಾಸಾದಿವ್ರತಗಳಾಗಲಿ
ಇಂಥ ವಿವೇಕಯುತವಾದ ಹೋರಾಟದಿಂದ ನೀನು
ಮುಸ್ಲಿಮನಾಗುತ್ತೀಯ.
ಸಚ್ಚಾರಿತ್ರವೇ ನಿನ್ನ ಕಾಬಾ: ಸತ್ಯವೇ ನಿನ್ನ ಪ್ರವಾದಿ:
ಸತ್ಕರ್ಮಗಳೇ ಪ್ರಾರ್ಥನೆ;
ದೈವೇಚ್ಛೆಗೆ ಶರಣಾಗುವುದೇ
ನಿನ್ನ ಗುಲಾಬಿ ತೋಟ
ಇಷ್ಟಾದರೆ ಭಗವಂತನು
ನಿನ್ನನ್ನು ಕಾಪಾಡುತ್ತಾನೆ.

**–ನಾನಕ**

ದೇಹವೇ ದೇವಾಲಯವಾದ ಮೇಲೆ
ಮತ್ತೆ ಬೇರೆ ದೇಗುಲಕ್ಕೆ ಎಡೆಯಾಡುವರಿಗೆ
ಏನ ಹೇಳಲಯ್ಯಾ ?
ಗುಹೇಶ್ವರಾ ನೀನು ಕಲ್ಲಾದರೆ
ನಾನೇನಪ್ಪೆನಯ್ಯಾ ?

**–ಅಲ್ಲಮಪ್ರಭು**

ಗುಡಿಯು ನೋಡಿರಣ್ಣಾ, ದೇಹದ
ಗುಡಿಯು ನೋಡಿರಣ್ಣಾ
ಗುಡಿಯು ನೋಡಿರಿದು
ಪೊಡವಿಗೆ ಒಡೆಯುನು
ಅಡಗಿಕೊಂಡು ಕಡುಬೆಡಗಿನೊಳಿರುತಿಹ
ಗುಡಿಯು ನೋಡಿರಣ್ಣಾ.

—ಶಿಶುನಾಳ ಷರೀಫ

ಕಲ್ಲ ಮನೆಯು ಮಾಡಿ
ಕಲ್ಲ ದೇವರ ಮಾಡಿ
ಆ ಕಲ್ಲು ಕಲ್ಲ ಮೇಲೆ ಕೆಡೆದರೆ
ದೇವರೆತ್ತ ಹೋದರೋ ?

—ಅಲ್ಲಮಪ್ರಭು

ವಿಗ್ರಹವು ಕಲ್ಲು; ದೇವಸ್ಥಾನವೂ ಕಲ್ಲು,
ಮೇಲೂ ಕಲ್ಲು, ಒಳಗೂ ಕಲ್ಲು, ಎಲ್ಲವೂ ಕಲ್ಲು.
ಅಯ್ಯಾ ಮೂರ್ಖ, ಇಲ್ಲಿ ಯಾವುದಕ್ಕೆ
ಪೂಜೆ ಸಲ್ಲಿಸುತ್ತೀಯ ?
ನಿನ್ನ ಅಂತರಾತ್ಮದ ಮೇಲೆ ನಿನ್ನ ಮನಸ್ಸನ್ನು ಕೇಂದ್ರೀಕರಿಸು.

—ಲಲ್ಲಯೋಗೀಶ್ವರಿ

ಉಳ್ಳವರು ಶಿವಾಲಯವ ಮಾಡುವರು;
ನಾನೇನ ಮಾಡುವೆ, ಬಡವನಯ್ಯಾ.
ಎನ್ನ ಕಾಲೇ ಕಂಭ, ದೇಹವೇ ದೇಗುಲ
ಸಿರ ಹೊನ್ನ ಕಳಸವಯ್ಯಾ.
ಕೂಡಲ ಸಂಗಮದೇವ ಕೇಳಯ್ಯ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

**–ಬಸವಣ್ಣ**

ದೇವರ ಅತ್ಯುತ್ತಮ ದೇವಸ್ಥಾನ ನೀನು. ಬೇರೆ ಯಾವ ದೇಗುಲವನ್ನೂ ವಿಗ್ರಹವನ್ನೂ ಗ್ರಂಥವನ್ನೂ ಪೂಜಿಸುವ ಬದಲು ನಾನು ನಿನ್ನನ್ನೆ ಪೂಜಿಸುತ್ತೇನೆ. ಜೀವಂತವಾದ ದೇವರು ನಿಮ್ಮಲ್ಲಿಯೆ ಇದ್ದಾನೆ. ಆದರೂ ಕೆಲಸಕ್ಕೆ ಬಾರದ ಗುಡಿ ಚರ್ಚು ಮಸೀದಿಗಳನ್ನು ನೀವು ಕಟ್ಟುತ್ತಿರುವಿರಿ.

**–ಸ್ವಾಮಿ ವಿವೇಕಾನಂದ**

ಮೂಕ ಜನಕೋಟಿಯ ಹೃದಯದಲ್ಲಿರುವ ದೇವರನ್ನಲ್ಲದೆ,
ಬೇರೆ ದೇವರನ್ನು ನಾನು ಮಾನ್ಯ ಮಾಡುವುದಿಲ್ಲ;
ಈ ಜನಕೋಟಿಯ ಸೇವೆಯ ಮೂಲಕವೇ
ಸತ್ಯ ಸ್ವರೂಪನಾದ ದೇವರನ್ನು ನಾನು ಪೂಜಿಸುತ್ತೇನೆ.

**–ಮಹಾತ್ಮಾ ಗಾಂಧೀ**

ಮಠವೇಕೋ ಪರ್ವತವೇಕೋ
ಜನವೇಕೋ ನಿರ್ಜನವೇಕೋ
ಚಿತ್ತ ಸಮಾಧಾನ ಉಳ್ಳ ಶರಣಂಗೆ ?
ಮತ್ತೆ ಹೊರಗಣ ಚಿಂತೆ-ಧ್ಯಾನ-ಮೌನ
ಜಪ-ತಪವೇಕೋ ತನ್ನ ತಾನರಿದ ಶರಣಂಗೆ
ಗುಹೇಶ್ವರಾ ?

**-ಅಲ್ಲಮಪ್ರಭು**

ಇದು ಭಗವಂತ ಇರುವ ಸ್ಥಳ ಎಂಬುದನ್ನು ಕಂಡಾಗ
ಈ ಎರಡು ಹೆಸರುಗಳು ಸೂಚಿಸುವುದು ಒಂದೇ
ವಸ್ತುವನ್ನು ಎಂಬುದನ್ನರಿತುಕೊಂಡೆ.
ವಾಸ್ತವದಲ್ಲಿ ದೇವರು ಮತ್ತು ಮನುಷ್ಯ ಒಂದೇ
ಎಂಬುದನ್ನು ನೀನು ತಿಳಿದುಕೊಳ್ಳಬೇಕು, ಮತ್ತು
ಒಪ್ಪಿಕೊಳ್ಳಬೇಕು.
ಮನುಷ್ಯನ ಒಂದು ತುದಿ ದೇವರು;
ದೇವರ ಒಂದು ತುದಿ ಮನುಷ್ಯ.
ದೇವರು ಮತ್ತು ಮನುಷ್ಯರು ಇರುವುದು ಒಂದೇ
ಸ್ಥಳದಲ್ಲಿ
ಅವರಿಬ್ಬರಿಗೂ ಇರುವುದು ಸಮಾನವಾದ ಸಂಕೇತ.

**-ಅಮೀನ್-ಅಲ್-ದಿನ್ ಅಲಾ (ಸೂಫೀ ಸಂತ)**

ಕೆಲವು ದೊಡ್ಡ ಮನುಷ್ಯರು ಹೇಳುತ್ತಾರೆ:
ಭಗವಂತನಿಗೆ ಪ್ರಾರ್ಥನೆ ಸಲ್ಲಿಸುವುದು ಎಂದರೆ
ಮಸೀದಿಯೊಂದನ್ನು ಕಟ್ಟುವುದು, ಮತ್ತು ಅದರೊಳಗೆ
ಪ್ರಾರ್ಥನೆ ಸಲ್ಲಿಸುವುದು, ಎಂದು.
ಹೀಗಾಗಿ ಅವರು ಮಸೀದಿಯಲ್ಲಿ ಹಗಲೂ ರಾತ್ರಿಯೂ
ಪ್ರಾರ್ಥನೆ ಸಲ್ಲಿಸುತ್ತಾರೆ.
ಆದರೆ ನಾನು ಹೇಳುತ್ತೇನೆ:
ಈ ಜಗತ್ತೇ ಮೊಟ್ಟಮೊದಲನೆಯ ಮಸೀದಿ
ಈ ಶರೀರವೆ ಪ್ರಾರ್ಥನೆಯ ದಿಕ್ಕನ್ನು ಸೂಚಿಸುವ ಗೂಡು
ಈ ಹೃದಯವೇ, ಮನುಷ್ಯನನ್ನು ಪಾರ್ಥನೆಗೆ
ಅರ್ಹನನ್ನಾಗಿಸುವ ಆಧ್ಯಾತ್ಮ ಜ್ಯೋತಿ ತುಂಬಿದ ದೀಪ.

**ಅಮೀನ್-ಅಲ್-ದಿನ್ ಆಲಾ**
**(ಸೂಫೀ ಸಂತ)**

ಪ್ರವಾದಿಗಳೇ ಹೇಳಿರಿ:
ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆ ಎಂದು
ನಾನು ಹೇಳುವುದಿಲ್ಲ
ನಾನು ದೇವ ಸಹಚರನೆಂದೂ ಹೇಳುವುದಿಲ್ಲ.
ನನ್ನ ಮೇಲೆ ಅವತೀರ್ಣಗೊಳ್ಳುತ್ತಿರುವ
ಆ ದಿವ್ಯವಾಣಿಯ ನಿರ್ದೇಶನದಂತೆ
ನಡೆದುಕೊಳ್ಳುತ್ತೇನೆ.

**-ಕುರ್‌ಆನ್**

ಮಸೀದಿಗೆ ಹೋಗಿ ಜನರಿಗೆ ಹೇಳು:
ನಿಮ್ಮ ಮನಸ್ಸು ಪ್ರಾರ್ಥನೆಯಲ್ಲಿ ಜಾಗದೆ ಇದ್ದರೆ
ನೀವೆಲ್ಲಾ ಪ್ರಾರ್ಥನೆಗೆಂದು ಸೇರುವುದು ವ್ಯರ್ಥ.
ಕೇವಲ ಬಹಿರಂಗಶುದ್ಧಿಯಿಂದ ಏನೂ ಪ್ರಯೋಜನವಿಲ್ಲ,
ಅಂತರಂಗ ಶುದ್ಧಿಯೆ ಮುಖ್ಯ.
ಹಾಗಿಲ್ಲದಾಗ ಎಂಥ ಪರಿಪೂರ್ಣ ಗುರುವಿನ
ಮಾರ್ಗದರ್ಶನವೂ ನಿಮಗೆ ದಾರಿ ತೋರದು.
ಅಂಥ ಪ್ರಾರ್ಥನೆ ಕೆಸರಿನ ಹೊಂಡದಲ್ಲಿ ಸ್ನಾನ ಮಾಡಿದಂತೆ,
ಅಂಥ ಪ್ರಣಾಮ ಕುಲುಮೆಯೊಳಗೆ ಧುಮುಕಿದಂತೆ,
ಅಂಥ ಧ್ಯಾನ ಇದ್ದಲಿನಿಂದ ಚಿತ್ರ ಬರೆದಂತೆ.
ಹೇಳುತ್ತಾನೆ ಬುಲ್ಲಾಷಾ: ಅವರಿವರ ಮಾರ್ಗದರ್ಶನಕ್ಕಾಗಿ
ದಾರಿ ತಪ್ಪಿ ಅಲೆಯುವುದನ್ನು ನಿಲ್ಲಿಸಿ
ನನ್ನ ಪ್ರಭುವನ್ನು ನಾನೇ ಹುಡುಕಿಕೊಂಡೆ.

**–ಬಲ್ಲಾಹಷ (ಸೂಫೀಸಂತ)**

ಸುಳ್ಳು ಪ್ರವಾದಿಗಳ ವಿಷಯದಲ್ಲಿ
ನೀವು ಎಚ್ಚರವಾಗಿರಿ.
ಕುರಿಯ ವೇಷ ತೊಟ್ಟು ನಿಮ್ಮ ಬಳಿಗೆ ಬರುವ
ಈ ನಕಲಿ ಪ್ರವಾದಿಗಳು
ಅಂತರ್ಯದಲ್ಲಿ ನಿಮ್ಮನ್ನು ಕಿತ್ತು ತಿನ್ನುವ ತೋಳಗಳು.

**–ಬೈಬಲ್**

ಅವರು ಪವಿತ್ರಗ್ರಂಥಗಳನ್ನು ಪಠಣ ಮಾಡುತ್ತಾರೆ
ಪ್ರಾರ್ಥನೆ ಸಲ್ಲಿಸುತ್ತಾರೆ.
ಆದರೆ ಅನಂತರ ಪರಸ್ಪರ ಕಚ್ಚಾಡುತ್ತಾರೆ,
ಅವರು ಕಲ್ಲು ಮರಗಳನ್ನು ಪೂಜಿಸುತ್ತಾರೆ,
ಅನಂತರ ಬಕಗಳಂತೆ ಧ್ಯಾನ ಮಾಡುತ್ತಾರೆ.
ದಿನಕ್ಕೆ ಮೂರು ಸಲ ಗಾಯತ್ರಿ ಜಪ ಮಾಡುತ್ತಾರೆ,
ಅನಂತರ ಸುಳ್ಳು ಹೇಳುತ್ತಾರೆ,
ಕೊರಳಲ್ಲಿ ಜಪ ಮಾಲೆಯಿದೆ; ಹಣೆಯಲ್ಲಿ ಗಂಧದ
ಗುರುತಿದೆ;
ಸೊಂಟದಲ್ಲಿ ಮಡಿಪಂಚೆಯಿದ್ದೆ; ತಲೆಯ ಮೇಲೆ
ಮುಸುಕಿದೆ.
ಆದರೆ ಅವರಿಗೆ ತಮ್ಮ ದೇವರ ಸ್ವರೂಪವೇ ಗೊತ್ತಿಲ್ಲ,
ಒಂದು ವೇಳೆ ಗೊತ್ತಿದ್ದರೆ, ಅದೆಲ್ಲಾ ಹುಸಿ ಎನ್ನುವುದು
ತನಗೆ ತಾನೇ ವೇದ್ಯವಾಗಬಹುದಾಗಿತ್ತು.

– ನಾನಕ್

ಕ್ರಿಯಾ ವೇತ್ತರಾದ ದ್ವಿಜರು ಅಗ್ನಿಯಲ್ಲಿ ದೇವರನ್ನು ಕಂಡರೆ,
ಮನೀಷಿಯರಾದವರು ತಮ್ಮ ಹೃದಯಗಳಲ್ಲಿಯೆ ಕಾಣುತ್ತಾರೆ.
ಅಲ್ಪಮತಿಗಳು ಪ್ರತಿಮೆಯಲ್ಲಿ ದೇವರನ್ನು ಕಂಡರೆ,
ಜ್ಞಾನಿಗಳು ದೇವರನ್ನು ಎಲ್ಲೆಲ್ಲಿಯೂ ಕಾಣುತ್ತಾರೆ.

– ಬ್ರಹ್ಮಪುರಾಣ

ನಾನು ಏಕಕಾಲಕ್ಕೆ, ನಿಜವಾದ ಅರ್ಥದಲ್ಲಿ
ವಿಗ್ರಹಾರಾಧಕನೂ ಹೌದು, ವಿಗ್ರಹ ಭಂಜಕನೂ ಹೌದು.

ವಿಗ್ರಹಾರಾಧನೆಯು ಹೊಂದಿರುವ ನಿಜವಾದ ಅರ್ಥವನ್ನು
ನಾನು ಗೌರವಿಸುತ್ತೇನೆ.
ಅದು ಮಾನವ ಜನಾಂಗದ ಉದ್ಧಾರದಲ್ಲಿ
ಮಹತ್ವದ ಪಾತ್ರವನ್ನು ವಹಿಸಿದೆ.
ಈ ಕಾರಣದಿಂದ ನಾನು ನಮ್ಮ ಈ ಪವಿತ್ರವಾದ ನಾಡನ್ನು
ಪಾವನಗೊಳಿಸಿರುವ ಸಹಸ್ರ ಸಹಸ್ರ ದೇಗುಲಗಳನ್ನು
ಮನಃಪೂರ್ವಕವಾಗಿ ಸಮರ್ಥಿಸುತ್ತೇನೆ.

ನಾನೊಬ್ಬ ವಿಗ್ರಹ ಭಂಜಕ:

ತನ್ನದಲ್ಲದ ಅನ್ಯದೈವಗಳನ್ನೂ, ಅನ್ಯ
ಪೂಜಾವಿಧಾನಗಳನ್ನೂ ಗುರುತಿಸಿ ಗೌರವಿಸಲು
ನಿರಾಕರಿಸುವ ಮತಾಂಧತೆ ಎಂಬ ವಿಗ್ರಹವನ್ನು ನಾನು
ಕುಟ್ಟಿ ಪುಡಿ ಮಾಡುತ್ತೇನೆ.

ಕಲ್ಲನ್ನೋ ಲೋಹದ ವಿಗ್ರಹವನ್ನೋ ದೇವರೆಂದು ಭಾವಿಸಿ
ಪೂಜಿಸುವ ರೂಕ್ಷ ಪ್ರವೃತ್ತಿಗಿಂತಲೂ,
ಈ ಮತಾಂಧತೆ ಎನ್ನುವುದು ಹೆಚ್ಚು ಅಪಾಯಕಾರಿಯೂ
ಸೂಕ್ಷ್ಮವೂ, ಕುಟಿಲವೂ ಆದದ್ದು.

—ಮಹಾತ್ಮಾ ಗಾಂಧೀ

ಪ್ರೀತಿಗೆ ಯಾವಾಗಲೂ ವೈಭವವೇ;
ವೇದಗಳ ಹಾಗೂ ಕುರ್‌ಆನ್‌ಗಳ ಪಠಣ
ಕೇವಲ ಪ್ರಯಾಸದಾಯಕವಾದದ್ದು.
ಕಂಡಕಂಡಲ್ಲಿ ನಮಸ್ಕಾರ ಮಾಡೀ ಮಾಡೀ
ನಿನ್ನ ಹಣೆ ಸವೆದು ಹೋಯಿತು.
ಇದರಿಂದ ಆದದ್ದೇನು ? ಇಲ್ಲ, ದೇವರು
ಮಂದಿರದಲ್ಲೂ ಇಲ್ಲ ಮೆಕ್ಕಾದಲ್ಲೂ ಇಲ್ಲ.
ಯಾರು ಪ್ರೀತಿಯನ್ನು ಕಂಡು ಕೊಂಡಿದ್ದಾನೋ
ಆ ಬೆಳಕಿನದೇ ವೈಭವ.

**–ಬುಲ್ಲಾಹಷಾಹ್ (ಸೂಫೀ ಸಂತ)**

ಈ ಮಂತ್ರಪಠಣ, ಭಜನೆ, ಜಪ–ತಪ ಇತ್ಯಾದಿಗಳನ್ನು
ಬಿಟ್ಟು ಬಾ.
ಬಾಗಿಲು ಮುಚ್ಚಿಕೊಂಡು ಈ ದೇವಸ್ಥಾನದ ಕತ್ತಲ
ಮೂಲೆಯಲ್ಲಿ
ನೀನು ಯಾರನ್ನು ಪೂಜಿಸುತ್ತಿದ್ದೀಯ ?
ಕಣ್ಣು ತೆರೆದು ನೋಡು, ನಿನ್ನ ದೇವರು ಅಲ್ಲಿ ಇಲ್ಲ !
ಅವನಿದ್ದಾನೆ, ಎಲ್ಲಿ ರೈತನು ಹೊಲವನ್ನು
ಉಳುತ್ತಿದ್ದಾನೆಯೋ ಅಲ್ಲಿ.
ಅವನಿದ್ದಾನೆ, ರಸ್ತೆಗಳನ್ನು ಮಾಡುವವರು ಎಲ್ಲಿ
ಕಲ್ಲುಗಳನ್ನು ಒಡೆಯುತ್ತಿದ್ದಾರೋ ಅಲ್ಲಿ.
ಅವನಿದ್ದಾನೆ, ಅವರೊಂದಿಗೆ ಮಳೆಯಲ್ಲಿ,ಬಿಸಿಲಿನಲ್ಲಿ
ಧೂಳು ತುಂಬಿ ಮಲಿನವಾದ ಉಡುಗೆಗಳಲ್ಲಿ.
ನಿನ್ನ ಮಡಿ ವಸ್ತ್ರವನ್ನು ಎಸೆದು ಬಾ, ಅವನಂತೆಯೇ
ಈ ಮಣ್ಣಿಗೆ ಮತ್ತು ಧೂಳಿಗೆ.

ಮುಕ್ತಿ? ಎಲ್ಲಿದೆ ನಿನಗೆ ಮುಕ್ತಿ, ಆ ನಮ್ಮ ಪ್ರಭುವೇ
ಸ್ವಸಂತೋಷದಿಂದ ಈ ಸೃಷ್ಟಿಯ ಬಂಧನವನ್ನು
ಒಪ್ಪಿಕೊಂಡಿರುವಾಗ,
ಮತ್ತು ಅವನೇ ತನ್ನನ್ನು ಎಲ್ಲರೊಂದಿಗೆ ನಿತ್ಯವೂ
ಬಂಧಿಸಿಕೊಂಡಿರುವಾಗ.
ನಿನ್ನ ಜಪತಪಾದಿಗಳನ್ನು ಬಿಟ್ಟು ಬಾ
ಆ ಹೂವುಗಳನ್ನು, ಧೂಪದೀಪಾದಿಗಳನ್ನು ಆಚೆ ಇರಿಸು
ನಿನ್ನ ಬಟ್ಟೆಗಳು ಧೂಳಾದರೇನು, ಹರಿದು ಚೂರಾದರೂ
ಏನು ?
ದೈನಂದಿನ ದುಡಿಮೆಯಲ್ಲಿ ಹಾಗೂ ಬೆವರಿನಲ್ಲಿ
ಅವನ ಜತೆಗೆ ನಿಲ್ಲು.

**–ರವೀಂದ್ರನಾಥ ಠಾಕೂರ್**

## — ೫ —

ಧಾರಣ ಸಾಮರ್ಥ್ಯ ಉಳ್ಳದ್ದೇ ಧರ್ಮ.
ಮಾನವ ಕೋಟಿಯ ಯೋಗಕ್ಷೇಮವನ್ನು
ವಹಿಸಿಕೊಳ್ಳತಕ್ಕದ್ದೇ ಧರ್ಮ.

**– ಮಹಾಭಾರತ**

ದಯೆ, ದಮ (ಸಂಯಮ) ದಾನ, ತಪಸ್ಸು, ಶೀಲ –
ಎಂಬ ಇವೇ ಪ್ರಧಾನವಾಗಿ ಉಳ್ಳ ಧರ್ಮವೇ ನಮ್ಮನ್ನು
ಉದ್ಧಾರ ಮಾಡಲು ಸಮರ್ಥವಾದದ್ದು.

**– ಪಂಪ**

ಧರ್ಮ ಎನ್ನುವುದು ಮಾತಿನ ಮಾಲೆಯಲ್ಲ,
ಯಾರು ಎಲ್ಲರನ್ನೂ ಸಮಾನರೆಂದು ಕಾಣುತ್ತಾನೋ
ಅವನೇ ನಿಜವಾದ ಧಾರ್ಮಿಕ ಮನುಷ್ಯ.
ಧರ್ಮ ಎಂದರೆ ಸಂತರ ಸಮಾಧಿಗಳನ್ನು ಶ್ಮಶಾನಗಳನ್ನು
ಸಂದರ್ಶಿಸುವುದಲ್ಲ; ಅಥವಾ
ಧ್ಯಾನ ಭಂಗಿಯಲ್ಲಿ ಕೂಡುವುದೂ ಅಲ್ಲ.
ಧರ್ಮವೆಂದರೆ ದೇಶದೇಶಗಳನ್ನು ಸುತ್ತುವುದಾಗಲೀ,
ತೀರ್ಥಗಳಲ್ಲಿ ಮುಳುಗುವುದಾಗಲೀ – ಅಲ್ಲ.
ಈ ಲೋಕದ ಮಾಲಿನ್ಯದ ಮಧ್ಯೆ
ನಿರ್ಮಲವಾದದ್ದನ್ನು ಸಾಧಿಸುವುದೇ ಧರ್ಮ

**– ನಾನಕ್**

ದಯವಿಲ್ಲದ ಧರ್ಮ ಆವುದಯ್ಯಾ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯಾ
ಕೂಡಲ ಸಂಗಮದೇವಾ.

–ಬಸವಣ್ಣ

ಭಗವಂತನ ಸಾಕ್ಷಾತ್ಕಾರಕ್ಕೆ ಹಾಗೂ ಭಗವಂತನ ಆರಾಧನೆಗೆ
ಅತ್ಯುತ್ತಮವಾದ ಮಾರ್ಗವೆಂದರೆ ದೀನ–ದಲಿತರ ಸೇವೆ·
ಮಾಡುವುದು; ಹಸಿದ ಹೊಟ್ಟೆಗೆ ಅನ್ನ ಕೊಡುವುದು;
ನೊಂದವರ ಕಂಬನಿ ಒರೆಸುವುದು; ಅನಾಥರಿಗೆ –
ಪತಿತರಿಗೆ ಕೈಲಾದಷ್ಟು ನೆರವಾಗುವುದು.

–ಸ್ವಾಮಿ ವಿವೇಕಾನಂದ

ಶ್ರೇಯಸ್ಸು ಮತ್ತು ಸಂಪತ್ತನ್ನು ತರುವ ಧರ್ಮಕ್ಕಿಂತ
ಮಿಗಿಲಾದ ಭಾಗ್ಯ ಈ ಬದುಕಿನಲ್ಲಿ ಬೇರೇನಿದೆ ?
ಧರ್ಮಕ್ಕಿಂತ ಮಿಗಿಲಾದ ಸಂಪತ್ತಿಲ್ಲ; ಅದನ್ನು
ಮರೆಯುವುದರಿಂದ ಒದಗುವ ಕೇಡಿಗಿಂತ
ಮಿಗಿಲಾದದ್ದೇನೂ ಇಲ್ಲ.
ಮನಸ್ಸಿನಲ್ಲಿ ನಿರ್ಮಲನಾದರೆ ಅದೇ ಧರ್ಮ
ಇನ್ನುಳಿದದ್ದೆಲ್ಲಾ ಬರಿಯ ತೋರಿಕೆ.

–ತಿರುವಳ್ಳುವರ್

ಧರ್ಮವನ್ನು ಕುರಿತಂತೆ ಯಾವುದೇ
ಬಲಾತ್ಕಾರಗಳಿರಬಾರದು.

– **ಕುರ್‌ಆನ್**

ಯಾರು ತನ್ನನ್ನೂ ಇತರರನ್ನೂ ಸಮಾನರೆಂದು
ಭಾವಿಸುತ್ತಾನೋ
ಯಾರು ಹಗಲಿನ ಬೆಳಕನ್ನೂ ಇರುಳಿನ ಕತ್ತಲನ್ನೂ
ಸಮಾನ ಮನೋಧರ್ಮದಿಂದ ಸ್ವೀಕರಿಸುತ್ತಾನೋ
ಯಾರ ಮನಸ್ಸು ದ್ವಂದ್ವಾತೀತವೋ, ಹಾಗೂ ಮುಕ್ತವೋ
ಅವನು ಮಾತ್ರ, ಅವನು ಮಾತ್ರವೇ
ದೇವರ ದೇವನಾದ ಪ್ರಭುವನ್ನು ಕಂಡವನು

– **ಲಲ್ಲಯೋಗೀಶ್ವರಿ**

ನನಗೆ ಯಾರನ್ನೂ ಕುರಿತು ಅಸೂಯೆಯಿಲ್ಲ,
ನಾನೀಗ ಸಾಧು–ಸಂತರ ಸಹವಾಸದಲ್ಲಿದ್ದೇನೆ.
ಯಾರಿಗೂ ನಾನು ಹೊರತಾದವನಲ್ಲ; ಯಾರೂ ನನಗೆ
ಹೊರಗಿನವರಲ್ಲ
ವಾಸ್ತವವಾಗಿ ಎಲ್ಲರೂ ನನಗೆ ಬೇಕಾದವರೇ,
ದೇವರು ಇರಿಸಿದಂತೆ ಇರುವುದರಲ್ಲಿ ನನಗೆ ಸಂತೋಷವಿದೆ.
ಇದು, ಸಾಧು ಸಜ್ಜನರ ಸಂಗದಿಂದ ನಾನು ಪಡೆದ ಅರಿವು

– **ಗುರುಗೋವಿಂದ ಸಿಂಗ್**

ಯಾರ ಮನಸ್ಸು ಸಮತ್ವದಲ್ಲಿ ನೆಲೆಗೊಂಡಿದೆಯೋ
ಅಂಥವರು ಈ ಸಂಸಾರದಲ್ಲಿ ಇದ್ದುಕೊಂಡೇ
ಅದನ್ನು ಗೆಲ್ಲುತ್ತಾರೆ. ಆ ಕಾರಣದಿಂದ ಅವರು
ನಿರ್ದೋಷವೂ, ಸಮಭಾವದಿಂದ ಕೂಡಿದ್ದೂ ಆದ
ಆ ಬ್ರಹ್ಮನಲ್ಲಿ ಸ್ಥಿರವಾಗಿ ನಿಲ್ಲುತ್ತಾರೆ.

**– ಭಗವದ್ಗೀತಾ**

ಆ ಪರಾತ್ಪರ ವಸ್ತುವಿನೊಂದಿಗೆ ನಮ್ಮನ್ನು ಬಂಧಿಸುವ
ಆ ಪ್ರೇಮದ ಸ್ವರೂಪ ಏನು ಗೊತ್ತೆ?
ಆತನ ಪ್ರೇಮದಲ್ಲಿ ಯಾರು ತನ್ನನ್ನು ತಾನು
ಸಂಪೂರ್ಣವಾಗಿ ಕರಗಿಸಿಕೊಳ್ಳಬಲ್ಲನೋ
ಅವನೆ ನಿಜವಾದ ಪ್ರೇಮಿ.
ಆತನಿಂದ ತನಗೆ ಒಳ್ಳೆಯದಾದಾಗ ಮಾತ್ರ
ತಾನು ಒಳ್ಳೆಯವನಂತೆ ವರ್ತಿಸಿ
ಆತನಿಂದ ತನಗೆ ಕೆಡುಕುಂಟಾದಾಗ
ತಾನೂ ಕೆಟ್ಟವನಂತೆ ವರ್ತಿಸುವವನು
ನಿಜವಾದ ಪ್ರೇಮಿ ಅಲ್ಲ
ಯಾಕೆಂದರೆ ಅಂಥ ನಡವಳಿಕೆ
ಕೇವಲ ವ್ಯಾಪಾರವಾಗುತ್ತದೆ.

**– ನಾನಕ್**

ಧರ್ಮ ಎನ್ನುವುದು – ಏಕಕಾಲಕ್ಕೆ ಧಾರ್ಮಿಕವೂ, ನಮ್ಮ ಅಂತರಾಳದ ಸ್ವಭಾವವನ್ನು ನಿಯಂತ್ರಿಸುವ ನಿಯಮವೂ ಆಗಿರುವ ಧರ್ಮ ಎನ್ನುವುದು, ಪಾಶ್ಚಿಮಾತ್ಯರು ಭಾವಿಸುವಂತೆ ಕೇವಲ ಒಂದು ಮತವ್ರೋ, ಪಂಥವ್ರೋ, ಸಿದ್ಧಾಂತವ್ರೋ, ಅಥವಾ ನೈತಿಕವ್ರೋ ಸಾಮಾಜಿಕವ್ರೋ ಆದ ಒಂದು ಆದರ್ಶವ್ರೋ, ಅಲ್ಲ. ಅದು ನಮ್ಮ ಜೀವನವನ್ನು ಅದರ ಸಮಸ್ತಾಂಶಗಳಲ್ಲಿಯೂ ನಿಯಂತ್ರಿಸುವ ಒಂದು ನಿಯಮವಾಗಿದೆ. ನ್ಯಾಯವಾದುದನ್ನೂ, ಪರಿಪೂರ್ಣವಾದುದನ್ನೂ ಅನ್ವೇಷಿಸಬೇಕೆನ್ನುವ ಮನುಷ್ಯನ ಮೂಲಪ್ರವೃತ್ತಿಯು ತನ್ನ ಸತ್ಯ ಹಾಗೂ ಸಮರ್ಥನೆಯನ್ನು ಧರ್ಮದಲ್ಲಿ ಕಂಡುಕೊಳ್ಳುತ್ತದೆ. ಹಾಗೆ ನೋಡಿದರೆ ಎಲ್ಲವೂ ಧರ್ಮವೇ–ನಿಸರ್ಗದತ್ತವಾದ ಒಂದು ಜೀವನ ಸೂತ್ರವೆಂಬ ಅರ್ಥದಲ್ಲಿ. ಆದರೆ ಮನುಷ್ಯನಿಗೆ ಧರ್ಮ ಎನ್ನುವುದು ತನ್ನ ಸಹಜೀವಿಗಳೊಂದಿಗೆ, ಅತ್ಯುತ್ತಮವಾದ ರೀತಿಯಲ್ಲಿ ನಡೆದುಕೊಳ್ಳಬೇಕೆನ್ನುವ ಒಂದು ಪ್ರಜ್ಞಾಪೂರ್ವಕವಾದ ಆಚರಣೆ.

ಭಾರತೀಯರ ಪ್ರಕಾರ ಸರ್ವಗ್ರಾಸಿಯಾದ ಧರ್ಮ ಯಾವುದೆಂದರೆ, ಮನುಷ್ಯನ ಮನಸ್ಸು ಮತ್ತು ಆತ್ಮಗಳ ಪರಿಪೂರ್ಣವಾದ ವಿಕಾಸವಾಗಿರುತ್ತ, ವಿಶ್ವಸಾಮಾನ್ಯವಾದ ಕೆಲವು ಗುಣಗಳ ಶಕ್ತಿ ಸಾಮರ್ಥ್ಯಗಳ ಸಾಮರಸ್ಯದಿಂದ ಅತ್ಯುತ್ತಮವಾದ ಮನುಷ್ಯನನ್ನು ನಿರ್ಮಿಸುವ ಪ್ರೇರಕವಾಗಿದೆ.

**–ಮಹರ್ಷಿ ಅರವಿಂದರು**

..... ಪ್ರತಿಯೊಂದು ಧರ್ಮವನ್ನೂ ಸ್ವಲ್ಪಕಾಲ ಆಚರಿಸಿ ನೋಡಬೇಕು. ಪಗಡೆ ಆಟದಲ್ಲಿ ಪಗಡೆ ಕಾಯಿ ಎಲ್ಲಾ ಮನೆಗಳ ಮೂಲಕ ಹಾದುಹೋಗದೆ ಇದ್ದರೆ ಅದು ಹೇಗೆ ಹಣ್ಣಾಗಬಲ್ಲದು ? ಆದರೆ ಒಮ್ಮೆ ಅದು ಹಣ್ಣಾಯಿತು ಎಂದರೆ ಅದನ್ನು ಯಾರೂ ಹೊಡೆಯಲು ಪ್ರಯತ್ನಿಸರು

– ಶ್ರೀರಾಮಕೃಷ್ಣ ಪರಮಹಂಸ

ನನ್ನ ಧರ್ಮವೇ ಶ್ರೇಷ್ಠವೆಂದು ನಾನು ಹೇಳುವುದಿಲ್ಲ:
ನೀನು ಹೋಗಿ ಇತರ ಧರ್ಮಗಳವರನ್ನು ಕೇಳಿ ಬಾ,
ಆಮೇಲೆ ನನ್ನನ್ನು ಕೇಳು.

ಯಾವ ಧರ್ಮ ಅತ್ಯುತ್ತಮವೆಂದು ನಿನಗೆ
ತೋರುತ್ತದೆಯೋ, ಅದನ್ನು ಅನುಸರಿಸು.

– ಬುದ್ಧ

ಪ್ರತಿಯೊಂದು ಧರ್ಮವೂ ನನಗೆ ನನ್ನ ಧರ್ಮದಷ್ಟೇ
ಅಮೂಲ್ಯವಾದದ್ದು.

ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ
ಬದಲಾಯಿಸಿಕೊಳ್ಳುವ ಸಂಗತಿಯೇ ಅಸಂಗತವಾದದ್ದು.
ಒಬ್ಬ ಹಿಂದು ಇನ್ನೂ ಉತ್ತಮನಾದ ಹಿಂದುವಾಗುವಂತೆ,
ಒಬ್ಬ ಮುಸ್ಲಿಂ ಇನ್ನೂ ಉತ್ತಮನಾದ
ಮುಸ್ಲಿಮನಾಗುವಂತೆ,
ಒಬ್ಬ ಕ್ರೈಸ್ತ ಇನ್ನೂ ಉತ್ತಮನಾದ ಕ್ರೈಸ್ತನಾಗುವಂತೆ
ನಾವು ನೆರವಾಗಬೇಕು.

– ಮಹಾತ್ಮಾ ಗಾಂಧೀ

ನಮ್ಮ ಧರ್ಮವೆ ಸರಿ, ಉಳಿದವರದೆಲ್ಲ ತಪ್ಪು ಎಂಬ ಭಾವನೆ ಒಳ್ಳೆಯದಲ್ಲ.

ಭಗವಂತ ಒಬ್ಬನೆ ವಿನಾ ಇಬ್ಬರಲ್ಲ.
ಆತನನ್ನು ಭಿನ್ನ ಭಿನ್ನ ಹೆಸರಿನಿಂದ ಬೇರೆ ಬೇರೆ ಜನರು ಕರೆಯುತ್ತಾರೆ.
ಕೆಲವರು ಆತನನ್ನು 'ಗಾಡ್' ಎಂದು ಕರೆಯುತ್ತಾರೆ.
ಇನ್ನು ಕೆಲವರು 'ಅಲ್ಲಾ' ಎಂದು ಕರೆಯುತ್ತಾರೆ.
ಇನ್ನೂ ಕೆಲವರು ಆತನನ್ನೆ 'ಕೃಷ್ಣ' 'ಶಿವ' 'ಬ್ರಹ್ಮ' ಹೀಗೆಲ್ಲಾ ಕರೆಯುತ್ತಾರೆ.

ಉದಾಹರಣೆಗೆ ಕೊಳದ ನೀರನ್ನು ನೋಡಿ:
ಒಂದು ಘಟ್ಟದವರು 'ವಾಟರ್' ಎಂದು, ಮತ್ತೊಂದು ಘಟ್ಟದವರು 'ಪಾನಿ' ಎಂದು, ಹಿಂದುಗಳು 'ಜಲ' ಎಂದು, ಕ್ರಿಶ್ಚಿಯನ್ನರು 'ವಾಟರ್' ಎಂದು, ಮುಸಲ್ಮಾನರು 'ಪಾನಿ' ಎಂದು ಕರೆಯುತ್ತಾರೆ.
ಆದರೆ, ವಸ್ತು ಮಾತ್ರ ಒಂದೇ ಒಂದು.

ಮತಗಳು ಕೇವಲ ಪಥಗಳು ಮಾತ್ರ.
ಪ್ರತಿಯೊಂದು ಧರ್ಮವೂ ಭಗವಂತನ ಸಾಕ್ಷಾತ್ಕಾರಕ್ಕೆ ಒಂದೊಂದು ಮಾರ್ಗ.
ಇದು, ನದಿಗಳು ಹಲವು ಹತ್ತು ದಿಕ್ಕುಗಳಿಂದ ಹರಿದುಬಂದರೂ ಕಡೆಗೆ ಸಾಗರದಲ್ಲಿ ಐಕ್ಯವಾಗುವ ಹಾಗೆ.

**–ಶ್ರೀರಾಮಕೃಷ್ಣ ಪರಮಹಂಸ**

ಭಗೀರಥನ ಸಾರಥ್ಯವು ಸಾರ್ಥಕವಾಯಿತು
ಗಂಗೆಯು ಇಳಿಯೆ
'ನಮೋ' ಎಂಬೆ ಆ ಮನೋರಥಕೆ ನಾ ಬೇರೆ
ಏನೂ ತಿಳಿಯೆ
ಧರ್ಮವ ಬಿಡದೇ ಮತಗಳು ನಡೆದರೆ,
ವೈಭವ ಹೆಚ್ಚಿನದೇನು ?
ಒಂದೇ ಬಾನಲಿ ಬಾಳವೆ ಗ್ರಹಗಳು,
ಚಿಕ್ಕೆಗಳೊಡನೇ ಭಾನು ?

–ದ.ರಾ. ಬೇಂದ್ರೆ

ಯಾರಿಗೆ ತನ್ನಲ್ಲಿ ತನಗೆ ನಂಬಿಕೆಯಿಲ್ಲವೋ ಅವನೇ ನಾಸ್ತಿಕ.
ಹಿಂದಿನ ಧರ್ಮಗಳು ಹೇಳಿದವು: ದೇವರಲ್ಲಿ ನಂಬಿಕೆ
ಇಲ್ಲದವನು ನಾಸ್ತಿಕ ಎಂದು.
ಆದರೆ ಹೊಸಧರ್ಮ ಹೇಳುತ್ತದೆ: ಯಾರಿಗೆ ತನ್ನಲ್ಲಿ
ತನಗೇ ನಂಬಿಕೆ ಇಲ್ಲವೋ, ಅವನೆ ನಾಸ್ತಿಕ ಎಂದು.

–ಸ್ವಾಮಿ ವಿವೇಕಾನಂದ

ಜಗತ್ತಿನಲ್ಲಿ ಯಾವುದಾದರೂ ಒಂದು
ಸರ್ವಸಾಮಾನ್ಯವಾದ ಧರ್ಮವಿದ್ದುದೇ ಆದರೆ, ಅದು
ಯಾವುದೇ ಒಂದು ಕಾಲದ ಮತ್ತು ದೇಶದ ಮೇರೆಯನ್ನು
ಮೀರಿದುದಾಗಿರಬೇಕು.

–ಸ್ವಾಮಿ ವಿವೇಕಾನಂದ

ಧಾರ್ಮಿಕ ಸಹನೆಯನ್ನೂ,
ಎಲ್ಲ ಧರ್ಮಗಳೂ ಅಂಗೀಕಾರಯೋಗ್ಯ ಎಂಬುದನ್ನೂ,
ಜಗತ್ತಿಗೆ ಬೋಧಿಸಿದ ಧರ್ಮಕ್ಕೆ ಸೇರಿದವನು ನಾನು.
ಪರಧರ್ಮ ಸಹಿಷ್ಣುತೆಯಲ್ಲಿ ನನಗೆ ಅಗಾಧವಾದ
ವಿಶ್ವಾಸವಿದೆ; ಅಷ್ಟೇ ಅಲ್ಲ, ಎಲ್ಲ ಧರ್ಮಗಳೂ ಸತ್ಯ
ಎಂಬುದನ್ನು ನಾನು ಒಪ್ಪುತ್ತೇನೆ. ಜಗತ್ತಿನ ಎಲ್ಲ
ರಾಷ್ಟ್ರಗಳಲ್ಲಿ, ಎಲ್ಲ ಧರ್ಮಗಳಲ್ಲಿ ಯಾರು ಯಾರು
ಹಿಂಸೆಗೆ ಒಳಗಾದರೋ, ಅವರಿಗೆಲ್ಲ ಆಶ್ರಯವನ್ನು ನೀಡಿದ
ದೇಶಕ್ಕೆ ಸೇರಿದವನು ನಾನು ಎಂಬ ಹೆಮ್ಮೆ ನನ್ನದು.

**–ಸ್ವಾಮಿ ವಿವೇಕಾನಂದ**

ಈ ವಿಶ್ವದಲ್ಲಿ ತಾನೊಬ್ಬನೇ ಇರುವುದು ಎಂಬ ಹಾಗೆ ಯಾವ ಮಾನವ ವ್ಯಕ್ತಿಯೂ ಭ್ರಮಿಸಬಾರದು ಎಂಬ ಎಚ್ಚರವನ್ನು ಸನಾತನವಾಗಿ ಇಡುವಂಥದು ಧರ್ಮ. ಈ ಧಾರಣ ಸೂತ್ರವನ್ನು ಪ್ರತಿಜನಾಂಗವೂ, ತಲೆಮಾರೂ ತನಗೆ ಬೇಕಾದ ಹಾಗೆ ರೂಪಿಸಿಕೊಳ್ಳಬಹುದು; ಆದರೆ, ಹಾಗೆ ಮಾಡುವಾಗ ನಮ್ಮ ಪ್ರಜ್ಞಾಪರಿಧಿಯೊಳಕ್ಕೆ ಬರುವ ಯಾವೊಂದು ಸತ್ಯ ಸಂಗತಿಯನ್ನೂ ನಿರಾಕರಿಸಬಾರದು.

**–ಎಂ. ಗೋಪಾಲಕೃಷ್ಣ ಅಡಿಗ**

ಧರ್ಮ ಎನ್ನುವುದು ಕೇವಲ ಕೆಲವು ಸಾಧು ಸಂತರ ಹಾಗೂ ಜಿಜ್ಞಾಸುಗಳ ಮಟ್ಟಿಗಲ್ಲ. ಬಹುಸಂಖ್ಯಾತ ಶ್ರೀಸಾಮಾನ್ಯರ ಪಾಲಿಗೂ ನಿಜವಾಗಬೇಕಾದರೆ, ಅದು ತನ್ನ ಅಲೌಕಿಕ ಮತ್ತು ವೈಚಾರಿಕ ಲಕ್ಷಣಗಳಿಂದ ಮಾತ್ರವಲ್ಲ, ಇನ್ನಿತರ ವಿಷಯಗಳಲ್ಲಿಯೂ ನಮ್ಮ ಸಮಸ್ತ ವ್ಯಕ್ತಿತ್ವಕ್ಕೆ ಸಂಬಂಧಿಸಿದ್ದಾಗಿರಬೇಕು. ಕಲ್ಪನೆ, ಭಾವನೆ, ಸೌಂದರ್ಯಪ್ರಜ್ಞೆ, ಅರ್ಧ ಪ್ರಜ್ಞಾಸ್ತರದ ನಮ್ಮ ಪ್ರೇರಣೆಗಳೂ ಸಹ ಅದರ ಪ್ರಭಾವಕ್ಕೆ

ಒಳಗಾಗುವಂತಿರಬೇಕು. ಧರ್ಮ ಮನುಷ್ಯನನ್ನು ಅತಿಮಾನುಷಕ್ಕೆ, ಆಧ್ಯಾತ್ಮಿಕ ಸತ್ಯಕ್ಕೆ ಕರೆದೊಯ್ಯುಬೇಕು. ಅಷ್ಟೆ ಅಲ್ಲ, ಅದು ದೀಪ್ತವಾದ ವಿಚಾರ ಶಕ್ತಿಯ ನೆರವನ್ನು ತನ್ನ ಈ ಪಯಣಕ್ಕೆ ಬಳಸಿಕೊಳ್ಳಬೇಕು ದೈವತ್ವದ ಕರೆಗೆ ಓಗೊಡುವ ನಮ್ಮ ಸಂಕೀರ್ಣ ವ್ಯಕ್ತಿತ್ವದ ಸ್ವಭಾವವನ್ನು ಅದು ನಿರ್ಲಕ್ಷಿಸುವಂತಿರಬಾರದು. ಅದು ಪ್ರತಿಯೊಬ್ಬನನ್ನೂ ಆಧ್ಯಾತ್ಮೀಕರಣದತ್ತ ಕರೆದೊಯ್ದು, ಅದರ ನಿಜವಾದ ಹಾಗೂ ಜೀವಂತವಾದ ಶಕ್ತಿಯಲ್ಲಿ ವ್ಯಕ್ತಿಯು ಪಾಲುಗೊಳ್ಳುವಂತೆ ಮಾಡಬೇಕು.

**-ಮಹರ್ಷಿ ಅರವಿಂದರು**

ಹಿಂದೆ, ಧರ್ಮ ಎನ್ನುವುದು ಜನರ ಸ್ವಾತಂತ್ರ್ಯದ ಅಪೇಕ್ಷೆಯನ್ನು ಮಂಕುಗೊಳಿಸಿ ನಿದ್ರಾವಶರನ್ನಾಗಿ ಮಾಡುವ ಒಂದು ಸಾಧನವಾಗಿ ಬಳಸಲ್ಪಟ್ಟಿದೆ. ರಾಜರೂ ಚಕ್ರವರ್ತಿಗಳೂ ತಮ್ಮ ಸ್ವಾರ್ಥಕ್ಕಾಗಿ ಧರ್ಮವನ್ನು ದುರುಪಯೋಗ ಮಾಡಿಕೊಳ್ಳುತ್ತ, ತಾವು ದೈವಾಂಶ ಸಂಭೂತರೆಂದು ಜನರು ನಂಬಿ ತಮ್ಮ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದ್ದಾರೆ. ಪುರೋಹಿತರೂ, ಉಚ್ಚವರ್ಣದವರೂ, ತಮ್ಮ ಸವಲತ್ತುಗಳಿಗೆ ದೈವದ ಸಮ್ಮತಿಯಿದೆಯೆಂದು ಘೋಷಿಸಿಕೊಂಡಿದ್ದಾರೆ. ಇತರ ಬಹುಸಂಖ್ಯಾತ ಶ್ರೀಸಾಮಾನ್ಯರು ತಾವು ದುಃಸ್ಥಿತಿಯಲ್ಲಿ ಇರುವುದಕ್ಕೆ ಪೂರ್ವಜನ್ಮದ ಪಾಪ-ಪುಣ್ಯಗಳೇ ಕಾರಣ ಎಂದು ಧರ್ಮದ ಹೆಸರಿನಲ್ಲಿ ಪ್ರಚಾರ ಮಾಡಲಾಗಿದೆ.

**-ಜವಾಹರಲಾಲ್ ನೆಹರೂ**

ಧರ್ಮ ಎನ್ನುವುದು ವಿಜ್ಞಾನ ಸಮ್ಮತವಾಗಿರಬೇಕು; ಹಾಗಿಲ್ಲದಿದ್ದರೆ ಧರ್ಮವು ತನ್ನ ಘನತೆಯನ್ನು ಕಳೆದುಕೊಂಡು ಕೇವಲ ಅಣಕದ ವಸ್ತುವಾದೀತು; ಅಷ್ಟೆ ಅಲ್ಲ, ಬದುಕನ್ನು ನಿಯಂತ್ರಿಸುವ ಮೂಲ ತತ್ವವಾಗಿಯೂ ಅದು ತನ್ನ ಸತ್ವವನ್ನು ಕಳೆದುಕೊಳ್ಳುವುದಲ್ಲದೆ, ಕಾಲಕ್ರಮೇಣ ಚೂರುಚೂರಾಗಿ ನಷ್ಟ ಹೊಂದುತ್ತದೆ. ಆದ ಕಾರಣ ಧರ್ಮವು ವಿಜ್ಞಾನ ಸಮ್ಮತವಾಗಿರುವುದು ಅಗತ್ಯ. ಬೇರೆ ಮಾತಿನಲ್ಲಿ ಹೇಳುವುದಾದರೆ, ಧರ್ಮವು ನಿಜವಾಗಿಯೂ ಕ್ರಿಯಾಶೀಲವಾಗಿರಬೇಕಾದರೆ ವೈಚಾರಿಕತೆಯ ಬುನಾದಿಯ ಮೇಲೆ ನಿಲ್ಲಬೇಕು; ವೈಚಾರಿಕತೆ ಎನ್ನುವುದು ವಿಜ್ಞಾನ ಬುದ್ಧಿಗೆ ಮತ್ತೊಂದು ಹೆಸರು.

**–ಡಾ. ಬಿ.ಆರ್. ಅಂಬೇಡ್ಕರ್**

ಧರ್ಮಗಳು ಮಾನವತೆಯ ಅಭ್ಯುದಯಕ್ಕೆ ವಿಶೇಷವಾಗಿ ನೆರವಾಗಿವೆ. ಮನುಷ್ಯನ ನಡವಳಿಕೆಯ ಮೂಲಮಾನಗಳನ್ನು ಮೌಲ್ಯಗಳನ್ನು ರೂಪಿಸಿ, ಮನುಷ್ಯ ಜೀವನದ ನಿರ್ದೇಶಕ ಸೂತ್ರಗಳನ್ನು ಹಾಕಿಕೊಟ್ಟಿವೆ. ಆದರೆ ಅವು ಇಷ್ಟೆಲ್ಲ ಒಳ್ಳೆಯದನ್ನು ಮಾಡಿದ್ದರೂ, ಸತ್ಯವನ್ನು ಸಿದ್ಧರೂಪಗಳಲ್ಲಿ ಹಾಗೂ ಸಿದ್ಧಾಂತಗಳಲ್ಲಿ ಸ್ಥಗಿತಗೊಳಿಸಿ, ವಿವಿಧ ಶಿಷ್ಟಾಚಾರ ಮತ್ತು ವಿಧಿವಿಧಾನಗಳಲ್ಲಿ, ಮೂಲಸತ್ವವು ತನ್ನ ಅರ್ಥವನ್ನು ಕಳೆದುಕೊಂಡು ಕೇವಲ ಜಡ ಸಂಪ್ರದಾಯವಾಗುವಂತೆಯೂ ಮಾಡಿವೆ ಎನ್ನುವುದನ್ನು ಮರೆಯುವಂತಿಲ್ಲ.... ಮನುಷ್ಯನ ಕುತೂಹಲವನ್ನು ಹಾಗೂ ವೈಚಾರಿಕತೆಯನ್ನು ಪೋಷಿಸುವ ಬದಲು, ಮನುಷ್ಯನು ನಿಸರ್ಗಕ್ಕೆ, ಧರ್ಮದ ಸಾಂಸ್ಥಿಕ ರೂಪಗಳಿಗೆ, ಹಾಗೂ ರೂಢಿಜಡವಾದ ಸಾಮಾಜಿಕ ಬದುಕಿಗೆ

ವಿಧೇಯನಾಗಿರುವ ಸಿದ್ಧಾಂತಗಳನ್ನು ಬೆಳೆಯಿಸಿವೆ. ಹಾಗೂ ಮನುಷ್ಯನ ಸಹಜ ಪ್ರವೃತ್ತಿಯಾದ ಪ್ರಗತಿಯ ಗತಿಯನ್ನು ಧರ್ಮಗಳು ಈ ಮೂಲಕ ಕುಂಠಿತಗೊಳಿಸಿವೆ ಎಂದು ಹೇಳಬೇಕಾಗಿದೆ.

**–ಜವಾಹರಲಾಲ್ ನೆಹರೂ**

ಜಗತ್ತಿಗೆಲ್ಲ ಒಂದೇ ಧರ್ಮವಿರಬೇಕು ಎನ್ನುವುದು
ಈ ಹೊತ್ತಿನ ಅಗತ್ಯವಲ್ಲ.
ಅಗತ್ಯವಾದುದೆಂದರೆ ವಿವಿಧ ಧರ್ಮಗಳವರ ನಡುವೆ
ಪರಸ್ಪರ ಗೌರವ ಹಾಗೂ ಸಹಿಷ್ಣುತೆ.
ಒಂದು ಬಗೆಯ ನಿರ್ಜೀವ ಏಕತೆ ನಮ್ಮ ಗುರಿಯಲ್ಲ,
ನಮಗೆ ಬೇಕಾದುದು ವೈವಿಧ್ಯದಲ್ಲಿ ಏಕತೆ,

**–ಮಹಾತ್ಮಾ ಗಾಂಧೀ**

ಧಾರ್ಮಿಕ ಏಕತೆಯ ಸಮಾನ ಭೂಮಿಕೆಯನ್ನು ಕುರಿತಂತೆ ನೀವು ಸಾಕಷ್ಟು ಕೇಳಿದ್ದೀರಿ.

ಅದನ್ನು ಕುರಿತು ನನ್ನ ವಾದ ಏನೆಂಬುದನ್ನು ನಾನು ಮಂಡಿಸುವುದಿಲ್ಲ. ಆದರೆ, ಅಂಥ ಏಕತೆ ಯಾವುದಾದರೂ ಒಂದು ಧರ್ಮದ ಗೆಲುವಿನಿಂದ ಅಥವಾ ಇತರ ಧರ್ಮಗಳ ಪರಾಭವದಿಂದ ಸಾಧಿತವಾಗುತ್ತದೆ ಎಂದು ನೀವೇನಾದರೂ ಭಾವಿಸಿದ್ದರೆ, ನಾನು ಹೇಳುತ್ತೇನೆ: ಸೋದರನೆ ಆ ನಿನ್ನ ಬಯಕೆ ಈಡೇರುವುದು ಅಸಾಧ್ಯ; ಕ್ರೈಸ್ತರು ಹಿಂದುಗಳಾಗಲಿ ಎಂಬುದಾಗಲಿ, ಬೌದ್ಧರು ಕ್ರೈಸ್ತರಾಗಲಿ ಎಂಬುದಾಗಲಿ ಖಂಡಿತವಾಗಿಯೂ ನನ್ನ ಬಯಕೆ ಅಲ್ಲ.

ಬೀಜವನ್ನು ನೆಲದಲ್ಲಿ ಬಿತ್ತಿದ್ದಾಗಿದೆ. ಮಣ್ಣು, ಗಾಳಿ, ನೀರು ಎಲ್ಲವೂ ಅಲ್ಲಿವೆ. ಬೀಜವು ಮಣ್ಣು ಗಾಳಿ ನೀರಾಗಿ ಬಿಡುವುದೇನು ? ಅದು ಗಿಡವಾಗುತ್ತದೆ; ತನ್ನದೇ ಆದ ನಿಸರ್ಗ ನಿಯಮದಿಂದಾಗಿ ಗಾಳಿ, ನೀರು, ನೆಲಗಳನ್ನು ತನ್ನ ಸ್ವಭಾವವನ್ನಾಗಿ ಪರಿವರ್ತಿಸಿಕೊಂಡು ಗಿಡವಾಗಿ ಬೆಳೆಯುತ್ತದೆ.

ಧರ್ಮದ ವಿಷಯಕ್ಕೂ ಈ ಮಾತು ಅನ್ವಯಿಸುತ್ತದೆ. ಕ್ರೈಸ್ತರು ಹಿಂದೂ ಅಥವಾ ಬೌದ್ಧರಾಗಬೇಕಾಗಿಲ್ಲ. ಹಿಂದುವಾಗಲಿ ಬೌದ್ಧನಾಗಲಿ ಕ್ರೈಸ್ತರಾಗಬೇಕಾಗಿಲ್ಲ. ಪ್ರತಿಯೊಬ್ಬರೂ, ಅನ್ಯರ ಮನೋಧರ್ಮಗಳನ್ನು ಅರ್ಥ ಮಾಡಿಕೊಂಡು, ತನ್ನ ವಿಶಿಷ್ಟತೆಯನ್ನು ಉಳಿಸಿಕೊಂಡು ತನ್ನ ಸ್ವಭಾವಾನುಸಾರಿಯಾದ ನಿಯಮಗಳಿಗೆ ಅನುಗುಣವಾಗಿ ಬೆಳೆದು ನಿಲ್ಲಬೇಕು.

**–ಸ್ವಾಮಿ ವಿವೇಕಾನಂದ**

ನಮ್ಮ ಮಾತೃಭೂಮಿಯಲ್ಲಿ ಹಿಂದೂ ಮತ್ತು ಮುಸಲ್ಮಾನ ಧರ್ಮಗಳೆರಡೂ ಮಿಲನವಾಗಬೇಕು. ವೇದಾಂತದ ಮಿದುಳು, ಇಸ್ಲಾಮಿನ ದೇಹ ಇದೊಂದೇ ನಮ್ಮ ಪ್ರಗತಿಗೆ ದಾರಿ.

**–ಸ್ವಾಮಿ ವಿವೇಕಾನಂದ**

ನಮಗೆ ದೇವರು ಬೇಕು ದೇವರು, ಎನ್ನುತ್ತಾ ಆ ಭಾವನೆಯೊಂದಿಗೆ ನಾವು ಬೆರಸುವ ಅಂಧವಿಶ್ವಾಸ ಬೇಡ. ಈ ಬೇಡದ ಭಾಗವನ್ನು ಸುಲಿದು ಎಸೆದೆವಾದರೆ ಹತ್ತು ಮತಗಳು ದೇವರು ದೇವರು ಎನ್ನುವ ವಸ್ತು ಒಂದೇ ಎನ್ನುವುದು ವ್ಯಕ್ತವಾಗುವುದು.

**–ಮಾಸ್ತಿ ವೆಂಕಟೇಶ ಅಯ್ಯಂಗಾರ್**

ದೇವರೊಬ್ಬನೇ ಎನ್ನುವ ನಂಬಿಕೆ
ಎಲ್ಲ ಧರ್ಮಗಳ ತಳಹದಿಯಾಗಿದೆ.
ಆದರೆ, ಜಗತ್ತಿನಲ್ಲಿ ಒಂದೇ ಒಂದು ಧರ್ಮ
ನೆಲೆಗೊಳ್ಳುವ ಕಾಲ ಬರುತ್ತದೆಂದು ನನಗೆ ತೋರುವುದಿಲ್ಲ.
ತತ್ವಶಃ, ದೇವರು ಒಬ್ಬನೆ ಆದಕಾರಣ
ಧರ್ಮವೂ ಒಂದೇ ಎನ್ನುವುದೇನೂ ನಿಜ;
ಆದರೆ ವಾಸ್ತವದಲ್ಲಿ, ನಾನು ತಿಳಿದಂತೆ
ಯಾವ ಇಬ್ಬರು ವ್ಯಕ್ತಿಗಳಿಗೂ ಸಮಾನವಾದ ದೇವರ
ಕಲ್ಪನೆ ಇರುವುದು ಸಾಧ್ಯವಿಲ್ಲ.
ಆದಕಾರಣ, ಕಾಲ–ದೇಶ–ಮನೋಧರ್ಮಗಳಿಗೆ
ಅನುಸಾರವಾಗಿ, ಅವರವರ ಅಗತ್ಯಕ್ಕೆ ತಕ್ಕಂತೆ ವಿವಿಧ
ಧರ್ಮಗಳು, ಬಹುಶಃ ಎಲ್ಲ ಕಾಲದಲ್ಲೂ ಇರುತ್ತವೆ.

**–ಮಹಾತ್ಮಾ ಗಾಂಧೀ**

ಪ್ರಪಂಚದ ಯಾವ ಧರ್ಮವೂ ಹಿಂದೂ ಧರ್ಮದಷ್ಟು ಭವ್ಯವಾಣಿಯಲ್ಲಿ ಮನುಷ್ಯತ್ವದ ಘನತೆಯನ್ನು ಬೋಧಿಸುವುದಿಲ್ಲ; ಪ್ರಪಂಚದ ಯಾವ ಧರ್ಮವೂ ದೀನದಲಿತರ ಕೊರಳನ್ನು ಹಿಂದೂ ಧರ್ಮದಷ್ಟು ಕ್ರೂರವಾಗಿ ಹಿಸುಕುವುದಿಲ್ಲ.

**–ಸ್ವಾಮಿ ವಿವೇಕಾನಂದ**

ನಾನು ಹೇಳುತ್ತೇನೆ:
ಧರ್ಮ ಇರುವುದು ಮನುಷ್ಯನಿಗಾಗಿಯೆ ಹೊರತು
ಮನುಷ್ಯ ಧರ್ಮಕ್ಕಾಗಿ ಅಲ್ಲ.
ನೀವೇನಾದರೂ ಮನುಷ್ಯರನ್ನು ವ್ಯವಸ್ಥೆಗೆ ತಂದು
ಒಂದುಗೂಡಿಸುವುದರಲ್ಲಿ ಯಶಸ್ವಿಗಳಾಗಬೇಕಾದರೆ,
ಮೊದಲು ಇರುವ ಈ ಧರ್ಮವನ್ನು ಬದಲಾಯಿಸಿರಿ.
ಯಾವ ಧರ್ಮ ನಿಮ್ಮನ್ನು ಮನುಷ್ಯರೆಂದು
ಪರಿಗಣಿಸುವುದಿಲ್ಲವೋ,
ನಿಮಗೆ ಕುಡಿಯಲು ಒಂದು ಹನಿ ನೀರನ್ನು
ಕೊಡುವುದಿಲ್ಲವೋ,
ನಿಮ್ಮನ್ನು ದೇವಸ್ಥಾನದೊಳಕ್ಕೆ ಸೇರಿಸುವುದಿಲ್ಲವೋ
ಅಂಥ ಧರ್ಮಕ್ಕೆ, ತಾನು ನಿಜವಾದ ಧರ್ಮ
ಎನ್ನಿಸಿಕೊಳ್ಳಲು ಯಾವ ಅಧಿಕಾರವೂ ಇಲ್ಲ.

**–ಡಾ. ಬಿ.ಆರ್. ಅಂಬೇಡ್ಕರ್**

ದೈವಕ್ಕೆ ಅಥವಾ ನಿನ್ನ ದೈವತ್ವದ ದಾರಿಗೆ ಯಾವ ಹೆಸರನ್ನು
ಕೊಡೋಣ ಎಂದು ನಿಮ್ಮ ನಿಮ್ಮಲ್ಲೇ ವಿವಾದ ಬೇಡ.
ದಾರಿಗಳು ಅಂಕುಡೊಂಕಾದರೇನು, ಸುತ್ತಿ ಬಳಸಿದರೇನು;
ಆದರೆ ನೀನು ನಿನ್ನ ಗುರಿಯ ಎತ್ತರವನ್ನು ತಲುಪಿದಾಗ
ಕಾಣುವುದು ಅದೇ ಆಧ್ಯಾತ್ಮಿಕ ದೃಶ್ಯ ವಿಸ್ತಾರವನ್ನು.
ಜಗತ್ತಿನ ವಿವಿಧ ಪರಿಸರಗಳಲ್ಲಿ, ಈ ಎತ್ತರವನ್ನು
ಹತ್ತಿದವರು, ಕರೆಯುವುದು ಈ ಎತ್ತರಕ್ಕೆ
ಏರಬಲ್ಲವರನ್ನು ಮಾತ್ರ.

**–ಡಾ. ಎಸ್. ರಾಧಾಕೃಷ್ಣನ್**

ವಿಧವೆಯರ ಕಣ್ಣೀರನ್ನು ಒರೆಸಲಾಗದ
ಹಸಿದ ಹೊಟ್ಟೆಗೆ ಒಂದು ತುಂಡು ರೊಟ್ಟಿಯನ್ನು
ಕೊಡಲಾರದ
ದೇವರಲ್ಲಾಗಲೀ ಧರ್ಮದಲ್ಲಾಗಲೀ ನನಗೆ ನಂಬಿಕೆ ಇಲ್ಲ.

**–ಸ್ವಾಮಿ ವಿವೇಕಾನಂದ**

ನನ್ನ ಹಿಂದುತ್ವದ ಕಲ್ಪನೆ
ಯಾವುದೇ ಒಂದು ಪಂಗಡಕ್ಕೆ ಸೀಮಿತವಾದುದಲ್ಲ.
ಇಸ್ಲಾಂ, ಕ್ರೈಸ್ತ, ಬೌದ್ಧ, ಜಾರತೂಷ್ಟ್ರ ಈ ಧರ್ಮಗಳಲ್ಲಿ
ಒಳ್ಳೆಯದೆಂದು ಏನು ನನಗೆ ತಿಳಿದಿದೆಯೋ
ಆ ಎಲ್ಲವನ್ನೂ ಇದು ಒಳಗೊಳ್ಳುತ್ತದೆ.
ಉಳಿದೆಲ್ಲವನ್ನೂ ಹೇಗೋ ಹಾಗೆಯೆ ರಾಜಕೀಯವನ್ನೂ
ನಾನು ಧರ್ಮದ ದೃಷ್ಟಿಯಿಂದ ನೋಡುತ್ತೇನೆ.
ಸತ್ಯವೇ ನನ್ನ ಧರ್ಮ. ಅಹಿಂಸೆಯೋ ಅದನ್ನರಿತುಕೊಳ್ಳಲು
ಇರುವ ಏಕೈಕ ಮಾರ್ಗ.
ಖಡ್ಗದ ಸಿದ್ಧಾಂತವನ್ನು ನಾನು ಸಂಪೂರ್ಣವಾಗಿ
ನಿರಾಕರಿಸುತ್ತೇನೆ.

**–ಮಹಾತ್ಮಾ ಗಾಂಧೀ**

ರಸವೆ ಜನನ
ವಿರಸ ಮರಣ
ಸಮರಸವೇ ಜೀವನಾ

**–ದ.ರಾ. ಬೇಂದ್ರೆ**

ನಾವು ಸಮಾನವಾದ ಭಾವನೆಯೊಂದನ್ನು ಸೃಷ್ಟಿಸುವುದಾದರೆ, ಅದು ಹಿಂದೂಗಳ ಹಾಗೂ ಇನ್ನಿತರ ಕೋಮುಗಳವರ ನಡುವೆ ಸಹೋದರತ್ವದ ಭಾವನೆಯನ್ನು ಎಚ್ಚರಗೊಳಿಸುವುದು ಅಗತ್ಯವಾಗಿದೆ.

ಹೀಗೆ ಮಾಡಬೇಕಾದರೆ ಬಹುಸಂಖ್ಯಾತರಾದ ಹಿಂದುಗಳು ಈ ಒಂದು ಭಾವನೆಯನ್ನು ಮೊದಲು ತಮ್ಮೊಳಗೆ ರೂಢಿಸಿ ಕೊಳ್ಳಬೇಕು. ಕೇವಲ ರಾಜಕೀಯ ಉದ್ದೇಶದ ಸರ್ವ ಸಹೋದರತ್ವದ ಮಾತಿನ ಪ್ರದರ್ಶನಗಳಿಂದ ಏನೂ ಪ್ರಯೋಜನವಿಲ್ಲ. ಈ ಬಗೆಯ ಅಪ್ರಾಮಾಣಿಕ ನಡವಳಿಕೆ ಗಳಿಂದ ಯಾವ ಐಕ್ಯತೆಯೂ ಸಾಧಿತವಾಗುವುದಿಲ್ಲ.

ಈ ನಮ್ಮ ರಾಷ್ಟ್ರದ ಬಗ್ಗೆ ಹೊಸ ಎಚ್ಚರವನ್ನು ಪಡೆದ ನಮ್ಮ ತರುಣ ಜನಾಂಗ, ತನ್ನ ಹೃದಯಾಂತರಾಳಗಳಲ್ಲಿ ಸರ್ವ ಸಹೋದರತ್ವದ ಭಾವನೆಗಳನ್ನು ಬೆಳೆಯಿಸಿಕೊಂಡರೆ, ಈ ದೇಶದಲ್ಲಿರುವ ನಾವೆಲ್ಲರೂ – ಯಾವುದೇ ಕೋಮಿಗೆ ಸೇರಿರಲಿ – ಒಂದೇ ತಾಯಿಯ ಮಕ್ಕಳು ಎನ್ನುವ ಅರಿವು ಹುಟ್ಟೀತು. ಈ ಸಹೋದರತ್ವದ ಭಾವನೆ, ಸಹಜವಾಗಿಯೇ ನಿಜವಾದ ಪ್ರೇಮವಾಗಿ, ವಿವಿಧ ಮತ ಧರ್ಮಗಳ ನಡುವಣ ಕಂದರಕ್ಕೆ ಸೇತುವೆ ಕಟ್ಟಲು ಸಹಾಯಕವಾಗುತ್ತದೆ. ಇದು ಕೇವಲ ವ್ಯವಹಾರ ಚಾತುರ್ಯದಿಂದಾಗಲಿ, ತರ್ಕದಿಂದಾಗಲಿ ಸಾಧ್ಯವಾಗುವುದಿಲ್ಲ. ಅದು ಸಾಧ್ಯವಾಗುವುದು ಹೃದಯ ಹೃದಯಗಳ ಸಮ್ಮಿಲನದಿಂದ

**–ಮಹರ್ಷಿ ಅರವಿಂದರು**

ಎಲ್ಲಿ ವೇದಗಳಾಗಲಿ, ಕುರ್‌ಆನ್ ಆಗಲಿ, ಬೈಬಲ್ ಆಗಲಿ ಇಲ್ಲವೋ, ಅಂಥ ಒಂದು ನೆಲೆಗೆ ಮಾನವ ಕುಲವನ್ನು ಕರೆದೊಯ್ಯಬೇಕೆಂಬುದು ನನ್ನ ಅಪೇಕ್ಷೆಯಾಗಿದೆ.
ಆದರೂ, ಇದನ್ನು ಸಾಧಿಸಬೇಕಾದದ್ದು, ವೇದ, ಕುರ್‌ಆನ್, ಬೈಬಲ್‌ಗಳನ್ನು ಸಮನ್ವಯಗೊಳಿಸುವುದರಿಂದಲೇ ಎಲ್ಲ ಧರ್ಮಗಳೂ ಮೂಲತಃ ಒಂದೇ ಧರ್ಮದ ವಿವಿಧ ಅಭಿವ್ಯಕ್ತಿಗಳಾಗಿವೆಯೆ ಹೊರತು, ಬೇರೆ ಅಲ್ಲ ಎಂಬುದನ್ನು ಮಾನವಕುಲಕ್ಕೆ ನಾವು ತಿಳಿಸಬೇಕಾಗಿದೆ. ಹಾಗಾದಾಗ ಮಾತ್ರ ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಯಾವುದು ಅತ್ಯುತ್ತಮವೆಂದು ತೋರುತ್ತದೆಯೋ
ಅಂಥ ಮಾರ್ಗವನ್ನು ಆಯ್ಕೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

**–ಸ್ವಾಮಿ ವಿವೇಕಾನಂದ**

ನಾವು ನೋಡುತ್ತಿರುವಂತೆ ನಮ್ಮ ಎದುರಿಗೆ ವಿಜ್ಞಾನದ ಪರಿಣಾಮವಾಗಿ ಅಪರಿಮಿತವಾದ ಬದಲಾವಣೆಗಳಾಗುತ್ತಿವೆ. ಬದುಕಿನ ಇಡೀ ಸಂದರ್ಭವೇ ಪರಿವರ್ತನೆಗೆ ಒಳಗಾಗುತ್ತಿದೆ. ವಾಸ್ತವವಾಗಿ ನೋಡಿದರೆ, ಕಳೆದ ಹಲವು ದಶಕಗಳಲ್ಲಿ ವಿಜ್ಞಾನ ಹಾಗೂ ತಂತ್ರಜ್ಞಾನದ ಪರಿಣಾಮದಿಂದಾಗಿ ಅಸಂಖ್ಯವಾದ ಬದಲಾವಣೆಗಳು ನಮ್ಮ ಬದುಕಿನಲ್ಲಿ ಕಾಣಿಸಿಕೊಂಡಿವೆ. ಮತ್ತು ಈ ಬದಲಾವಣೆಯ ವೇಗ ಹೆಚ್ಚುತ್ತಲೇ ಇದೆ. ಮತ್ತು ಬರುವ ಮುಂದಿನ ಹಲವು ದಶಕಗಳಲ್ಲಿ ಇನ್ನೂ ಹೆಚ್ಚಿನ ಬದಲಾವಣೆಗಳಾಗುವುದು ಖಂಡಿತ – ಇದು ಕೇವಲ ಬಾಹ್ಯಾಕಾಶ ಸಂಶೋಧನೆಯ ವಿಷಯದಲ್ಲಿ ಮಾತ್ರವಲ್ಲ. ಮನುಷ್ಯ ಜೀವನದ ಮೇಲೆ ಪರಿಣಾಮವಾಗುವ ದೃಷ್ಟಿ ಯಿಂದಲೂ.

ಈ ಚಲನಶೀಲತೆಯಲ್ಲಿ ಪಾಲುಗೊಳ್ಳಬೇಕಾದರೆ, ನಮ್ಮನ್ನು ನಾವು ಈ ವೈಜ್ಞಾನಿಕ ಹಾಗೂ ತಂತ್ರಜ್ಞಾನ ವಿಸ್ತಾರಗಳಿಗೆ ಹೊಂದಿಕೊಳ್ಳುವಂತೆ ಸಿದ್ಧಪಡಿಸಿ ಕೊಳ್ಳಬೇಕಾಗುತ್ತದೆ.

ವಿಜ್ಞಾನ ಹಾಗೂ ತಂತ್ರಜ್ಞಾನಗಳನ್ನು ವಿವಿಧ ತಾಂತ್ರಿಕ ವಲಯಗಳಿಗೆ ವಿಸ್ತರಿಸುವಂತೆ ಪ್ರೋತ್ಸಾಹಿಸಲು ನಾವೂ ನೀವೂ ಬದ್ಧವಾಗುವುದರ ಜತೆಗೆ, ಬದುಕಿನ ಸಮಸ್ಯೆಗಳನ್ನು ಎದುರಿಸಲು ಅಗತ್ಯವಾದ ವೈಜ್ಞಾನಿಕ ಮನೋಧರ್ಮವನ್ನೂ ನಾವು ಬೆಳೆಯಿಸಿಕೊಳ್ಳಬೇಕಾಗಿದೆ. ಈ ಬಗೆಯ ವೈಜ್ಞಾನಿಕ ಮನೋಧರ್ಮವನ್ನು ಹೆಚ್ಚು ಹೆಚ್ಚಾಗಿ ನಾವು ರೂಢಿಸಿಕೊಳ್ಳದೆ ಹೋದರೆ, ನಾವು ಸಾಧಿಸುವ ಪ್ರಗತಿ ನಿಜವಾಗಿಯೂ ಅರ್ಥಪೂರ್ಣವಾಗಲಾರದು.

**–ಜವಾಹರಲಾಲ್ ನೆಹರೂ**

ವಿಜ್ಞಾನ ಸಂಪನ್ನವಾದ ಪಾಶ್ಚಾತ್ಯನಾಗರಿಕತೆ ನಮ್ಮನ್ನು ಇನ್ನೂರು ವರ್ಷ ಆಳಿದರೂ, ಅದರ ವಿಜ್ಞಾನ ಸೃಷ್ಟಿಸಿದ ಯಂತ್ರ ನಾಗರಿಕತೆಯನ್ನು ಅನುಕರಿಸಿದೆವೇ ಹೊರತು ಅದರ ವೈಜ್ಞಾನಿಕ ದೃಷ್ಟಿ ನಮ್ಮದಾಗಲಿಲ್ಲ. ಮತ್ತು ಆ ವೈಜ್ಞಾನಿಕ ದೃಷ್ಟಿಗೂ ತಾಯಿ ಬೇರಾದ ವೈಚಾರಿಕತೆಯನ್ನೂ ನಾವು ಮೈಗೂಡಿಸಿಕೊಳ್ಳಲಿಲ್ಲ. ಇನ್ನು ಮುಂದಾದರೂ ನಾವು ವೈಜ್ಞಾನಿಕ ದೃಷ್ಟಿಯ ಮತ್ತು ವೈಚಾರಿಕ ಬುದ್ಧಿಯ ನೆರವಿನಿಂದ ನಮ್ಮ ನಾಡಿನ ರಾಜಕೀಯ, ಸಾಮಾಜಿಕ, ಮತ್ತು ಮತಧಾರ್ಮಿಕ ರಂಗಗಳನ್ನು ಪರಿಶೋಧಿಸದಿದ್ದರೆ ನಮಗೆ ಕೇಡು ತಪ್ಪದು

**–ಕುವೆಂಪು**

ಹಿಂದೆ ಇದ್ದ ಧರ್ಮಗಳನ್ನೆಲ್ಲ ನಾನು ಸ್ವೀಕರಿಸುತ್ತೇನೆ.
ಮುಂದೆ ಏನೇನು ಬರುವುದೋ ಅದನ್ನೆಲ್ಲ ಸ್ವೀಕರಿಸುವುದಕ್ಕೆ
ನನ್ನ ಹೃದಯವನ್ನು ತೆರೆದಿಡುತ್ತೇನೆ.
ನಾನು ಮಹಮ್ಮದೀಯರ ಮಸೀದಿಗೆ ಹೋಗುತ್ತೇನೆ,
ಕ್ರೈಸ್ತರ ಚರ್ಚಿನಲ್ಲಿ ಶಿಲುಬೆಯ ಎದುರು ತಲೆಬಾಗುತ್ತೇನೆ,
ಬೌದ್ಧರ ವಿಹಾರದಲ್ಲಿ ಬುದ್ಧನ ಧರ್ಮದಲ್ಲಿ ಮತ್ತು
ಆತನ ಬೋಧೆಯಲ್ಲಿ ಶರಣಾಗತನಾಗುತ್ತೇನೆ,
ಹಿಂದೂಗಳೊಂದಿಗೆ ಅರಣ್ಯಕ್ಕೆ ಹೋಗಿ
ಎಲ್ಲೆಲ್ಲಿಯೂ ಬೆಳಗುತ್ತಿರುವ ಆ ಪರಂಜ್ಯೋತಿಯ
ದರ್ಶನಕ್ಕಾಗಿ
ನಾನೂ ಧ್ಯಾನಮಗ್ನನಾಗುತ್ತೇನೆ

–ಸ್ವಾಮಿ ವಿವೇಕಾನಂದ

'ಸನಾತನ ಧರ್ಮ'ವು ಭಾರತದ ಅತ್ಯಂತ ಪ್ರಾಚೀನವೂ
ವ್ಯಾಪಕವೂ ಆದ ಧರ್ಮವಾಗಿದೆ.
ಅದು ಈ ದೇಶದ ಜನತೆಯಲ್ಲಿ ತಾವೆಲ್ಲ ಒಂದು ಎಂಬ
ಒಂದು ಧಾರ್ಮಿಕ ಪ್ರಜ್ಞೆಗೆ ಸೇರಿದವರೆಂಬ
ಭಾವನೆಯನ್ನು ಬೆಳೆಯಿಸಿದೆ.
ಆದರೆ ಶತಮಾನಗಳ ಉದ್ದಕ್ಕೂ ಈ ದೇಶದ ನೆಲದಲ್ಲಿ
ಬೇರೆ ಬೇರೆಯ ಧರ್ಮಗಳು ಉದ್ಭವಿಸಿವೆ,
ಹಾಗೂ ಹೊರಗಿನಿಂದ ಈ ದೇಶಕ್ಕೆ ಬಂದಿವೆ
ಹಾಗೆ ಬಂದ ಧರ್ಮಗಳನ್ನು ಈ ಸನಾತನ ಧರ್ಮವು
ವಿಶ್ವಾಸದಿಂದ ಬರಮಾಡಿಕೊಂಡಿದೆ. ಅಷ್ಟೇ ಅಲ್ಲ, ಅವು

ಸನಾತನ ಧರ್ಮದೊಂದಿಗೆ ಬೆರತು ಒಂದು ಬಗೆಯ
ಧಾರ್ಮಿಕ ಸಾಮರಸ್ಯದ ಬೆಳವಣಿಗೆಗೆ ಕಾರಣವಾಗಿವೆ

ಭಾರತವು ಹಿಂದೂಗಳಿಗೆ ಹೇಗೋ, ಹಾಗೆಯೆ
ಬೌದ್ಧರಿಗೆ, ಜೈನರಿಗೆ, ಮುಸ್ಲಿಮರಿಗೆ, ಕ್ರೈಸ್ತರಿಗೆ,
ಸಿಖ್ಖರಿಗೆ, ಪಾರ್ಸಿಯರಿಗೆ, ಹಾಗೂ ಇನ್ನಿತರರಿಗೆ
ನೆಲೆಮನೆಯಾಗಿದೆ.

ಇದು ಕೇವಲ ಧರ್ಮಸಹಿಷ್ಣುತೆ ಅಲ್ಲ, ಅದಕ್ಕೂ
ಮಿಗಿಲಾದ, ಮಹತ್ತಾದ, ಎಲ್ಲವನ್ನೂ ಅಪ್ಪಿಕೊಳ್ಳುವ
ಒಂದು ಆಧ್ಯಾತ್ಮಿಕ ಸ್ವರಮೇಳನವಾಗಿದೆ.
ಭಾರತದ ನೆಲದಲ್ಲಿರುವ ಹಿಂದುವಾಗಲಿ,
ಮುಸ್ಲಿಮನಾಗಲಿ, ಬೌದ್ಧನಾಗಲಿ, ಕ್ರೈಸ್ತನಾಗಲಿ,
ಈ ಎಲ್ಲರೂ ಕೇವಲ ಆಯಾ ಮತಧರ್ಮಕ್ಕೆ
ಸೇರಿದವರಾಗಿ ಉಳಿಯದೆ, ಮಹತ್ತಾದ ಹಾಗೂ
ಸಮರ್ಥವಾದ, ಭಾರತವೆಂಬ ರಾಷ್ಟ್ರದವರಾಗಿಬಿಡುತ್ತಾರೆ

ಭಾರತವನ್ನು ನಿಜವಾಗಿಯೂ ಒಂದು ರಾಷ್ಟ್ರವನ್ನಾಗಿ
ರೂಪಿಸಬೇಕಾದರೆ, ನಮ್ಮ ನಮ್ಮ ಧಾರ್ಮಿಕ ಸಿದ್ಧಾಂತಗಳ
ಹಾಗೂ ಸಂಸ್ಥೆಗಳ ಬಗ್ಗೆ ಶ್ರದ್ಧೆಯನ್ನು ಉಳಿಸಿಕೊಂಡೂ,
ಬೇರೆ ಧರ್ಮಗಳ ಹಾಗೂ ಧಾರ್ಮಿಕ ಸಂಸ್ಥೆಗಳ ಬಗ್ಗೆ
ಸಹನೆಯನ್ನು ಬೆಳೆಯಿಸಿಕೊಂಡು ಎಲ್ಲರಿಗೂ ಸಮಾನವಾದ
ಸಾಮಾಜಿಕ ಯೋಗಕ್ಷೇಮದ ಬಗ್ಗೆ ಪ್ರೀತಿ ವಿಶ್ವಾಸ
ಕಾಳಜಿಗಳನ್ನು ಬೆಳೆಯಿಸಿಕೊಂಡು ಬದುಕುವುದನ್ನು ನಾವು
ಅತ್ಯಂತ ಅಗತ್ಯವಾಗಿ ಕಲಿಯಲೇಬೇಕಾಗಿದೆ.

**–ಮಹರ್ಷಿ ಅರವಿಂದರು**

ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ
ಬಡತನವ ಬುಡಮುಟ್ಟ ಕೀಳಬನ್ನಿ
ಮೌಢ್ಯತೆಯ ಮಾರಿಯನು ಹೊಗದೂಡಲೈತನ್ನಿ
ವಿಜ್ಞಾನ ದೀವಿಗೆಯ ಹಿಡಿಯ ಬನ್ನಿ
ಓ ಬನ್ನಿ ಸೋದರರೆ ಬೇಗ ಬನ್ನಿ

– **ಕುವೆಂಪು**

— ೭ —

ಕುಲ ಕುಲ ಕುಲ ಎನ್ನುತಿಹರು
ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ ?
ಆತ್ಮ ಯಾವ ಕುಲ, ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ?

—ಕನಕದಾಸ

ಕೆಲವರು ಉಡುತ್ತಾರೆ ನೀಲಿಬಟ್ಟೆಯನ್ನು
ಕೆಲವರು ಬಿಳಿಯದನ್ನು,
ಕೆಲವರು ತಮ್ಮನ್ನು ಕರೆದುಕೊಳ್ಳುತ್ತಾರೆ ಮುಸ್ಲಿಮರೆಂದು,
ಕೆಲವರು ಹಿಂದುಗಳೆಂದು,
ಕೆಲವರಿಗೆ ಬಹಿಷತ್‌ನ ಬಯಕೆ,
ಕೆಲವರಿಗೆ ಸ್ವರ್ಗದ ಆಸೆ
ಆದರೆ ನಾನಕನು ಹೇಳುತ್ತಾನೆ:
ಯಾರು ಭಗವಂತನ ಇಚ್ಛೆಯನ್ನು ಬಲ್ಲನೊ
ಅವನಿಗೆ ಭಗವಂತನ ಸೂಕ್ಷ್ಮಗಳೂ ಗೊತ್ತು

—ನಾನಕ್

ನಡೆವುದೊಂದೇ ಭೂಮಿ
ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರಲು
ಕುಲಗೋತ್ರ ನಡುವೆ ಎತ್ತಣದು—ಸರ್ವಜ್ಞ

—ಸರ್ವಜ್ಞ

ಸಮುದ್ರದಿಂದಲಾದ ತೆರೆಗಳು
ಆ ಸಮುದ್ರದೊಳಗಡಗುತ್ತ,
ಆ ಸಮುದ್ರದೊಳಗಿಹವು.
ನಿಮ್ಮಿಂದಾದ ಜಗತ್ತು ನಿಮ್ಮಲ್ಲಿಯೆ ಇರ್ದು
ನಿಮ್ಮಲ್ಲಿಯೆ ಅಡಗುವುದು.
ಬೇರೆ ಕುಲ ಉಂಟೆ ಜಗಕ್ಕೆ ?
ಇಂತೆಂದುದಾಗಿ ಬೇರೆ ಕುಲವೂ ಇಲ್ಲ, ಛಲವೂ ಇಲ್ಲ
ಸಿಮ್ಮಲಿಗೆಯ ಚೆನ್ನರಾಮ

**–ಚಂದಿಮರಸ**

ಒಂದೆ ಗಗನವ ಕಾಣುತ, ಒಂದೆ ನೆಲವನು ತುಳಿಯುತ
ಒಂದೆ ಧಾನ್ಯವನುಣ್ಣುತ, ಒಂದೆ ನೀರ್ಕುಡಿದು
ಒಂದೆ ಗಾಳಿಯನ್ ಉಸಿರ್ವ ನರಜಾತಿಯೊಳಗೆಂತು
ಬಂದುದೀ ವೈಷಮ್ಯ – ಮಂಕುತಿಮ್ಮ

**–ಡಿ.ವಿ.ಜಿ.**

ಜಾತಿಹೀನನ ಮನೆಯು
ಜ್ಯೋತಿ ತಾ ಹೀನವೆ ?
ಜಾತಿ ವಿಜಾತಿ ಎನಬೇಡ
ದೇವನೊಲಿದಾತನೇ ಜಾತ – ಸರ್ವಜ್ಞ

**–ಸರ್ವಜ್ಞ**

ಜನ್ಮತಃ ಎಲ್ಲರೂ ಮನುಷ್ಯರೇ:
ಯಾವ ಒಬ್ಬ ವ್ಯಕ್ತಿಯೂ
ಹುಟ್ಟಿನಿಂದ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ,
ವೈಶ್ಯನಾಗಲಿ, ಶೂದ್ರನಾಗಲಿ – ಅಲ್ಲ.
ತನ್ನ ಆಂತರಿಕ ಲಕ್ಷಣಗಳಿಂದ, ಅವನು
ಆಯಾ ವರ್ಣಕ್ಕೆ ಸೇರಿದವನಾಗುತ್ತಾನೆ.

**–ಮಹಾವೀರ**

ಜಟೆಯಿಂದಾಗಲೀ, ಗೋತ್ರದಿಂದಾಗಲೀ, ಹುಟ್ಟಿನಿಂದಾಗಲೀ
ಯಾರೂ ಬ್ರಾಹ್ಮಣರಾಗುವುದಿಲ್ಲ.
ಯಾರು ಸತ್ಯ–ಧರ್ಮಗಳನ್ನರಿತು ನಡೆಯುವರೋ
ಯಾರು ಶುಚಿಯಾಗಿರುವರೋ
ಅವರನ್ನು ನಾನು ಬ್ರಾಹ್ಮಣರೆಂದು ಕರೆಯುತ್ತೇನೆ.

**–ಬುದ್ಧ (ದಮ್ಮಪದ)**

ಮತ ನಮಗೊಂದು ದೊಡ್ಡ ಬಂಧನವಾಗಿದೆ.
ನಾಡಿನ ಏಳ್ಗೆಯ ಕುತ್ತಿಗೆಗೆ ಉರುಳಾಗಿದೆ.
ಪರಮ ಶಾಂತಿಯೂ ಪರಮಾನಂದವೂ ಆಗಿರುವ
ಪರಮೇಶ್ವರನನ್ನು ಪಡೆಯಲು ಮಾಡುವ ಪ್ರಯತ್ನವೇ
ಮತದ ನಿಜಾವಸ್ಥೆ. ಆದರೆ ಈಗ ನಾವು ಮತ ಎಂದು
ಕರೆದುಕೊಳ್ಳುವ ಆಚಾರ ಸಮೂಹ ಬರಿಯ
ಸಾಮಾಜಿಕ ಕಟ್ಟುಕಟ್ಟಳೆಗಳ ಕಾಟವಾಗಿದೆ...
ಕೆಲಸಕ್ಕೆ ಬಾರದ, ಶ್ರೇಯಸ್ಕರವೂ ಅಲ್ಲದ
ನೂರಾರು ಆಚಾರವ್ಯವಹಾರಗಳ ಸಮಷ್ಟಿಯೋ
ನಮ್ಮ ಮತದ ಹುರುಳಾಗಿ ಕುಳಿತಿದೆ.

**–ಕುವೆಂಪು**

ನಾವೆಲ್ಲರು ಒಂದೆ ಜಾತಿ, ಒಂದೆ ಮತ, ಒಂದೆ ಕುಲ;
ನಾವು ಮನುಜರು.
ನರರ ನಡುವಿನಡ್ಡ ಗೋಡೆಗಳನು ಕುಟ್ಟಿ ಕೆಡಹುವೆವು,
ನಾವು ವಿಲಯ ರುದ್ರರು
ಹೊಸ ಬಾಳಿನ ಹೊಸ ಸಮತೆಯ
ಸಮರಸವನು ಸಮೆವೆವು
ನಾವು ನವವಿಧಾತರು.

–ಎಂ. ಗೋಪಾಲಕೃಷ್ಣ ಅಡಿಗ

ಭಗವಂತನು ಹಿಂದೂಗಳ ದೇವಾಲಯದಲ್ಲಿರುವಂತೆಯೆ
ಮುಸಲ್ಮಾನರ ಮಸೀದಿಗಳಲ್ಲಿಯೂ ಇದ್ದಾನೆ.
ಮೇಲೆ ಕಾಣುವ ಭೇದಗಳೇನಿದ್ದರೂ, ಮೂಲತಃ
ಮನುಷ್ಯರೆಲ್ಲ ಒಂದೇ.
ಬೇರೆಬೇರೆಯ ಆಚಾರ–ವಿಚಾರಗಳಿದ್ದರೂ
ಬೇರೆಬೇರೆಯ ಪರಿಸರಗಳ ಪ್ರಭಾವಕ್ಕೆ ಒಳಗಾದರೂ
ಹಿಂದೂಗಳೂ ಮುಸಲ್ಮಾನರೂ ಒಂದೇ.
ಅವರೆಲ್ಲರೂ, ಅದೇ ನೀರು, ನೆಲ, ಗಾಳಿಗಳೆಂಬ
ಪಂಚಭೂತಗಳಿಂದ ಆದವರೇ,
ಕುರಾನು, ಪುರಾಣಗಳ ಮೂಲಕ ಅವರೆಲ್ಲ ಸ್ತುತಿಸುವುದು
ಆ ಒಬ್ಬನೇ ಆದ ದೇವರನ್ನೇ
ಯಾಕೆಂದರೆ ಅವರೆಲ್ಲರೂ ಜನಿಸಿರುವುದು
ಒಬ್ಬ ದೇವರಿಂದಲೇ.

–ಗುರುಗೋವಿಂದ ಸಿಂಗ್

ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡವನಿಗೆ
ಜಾತಿ–ಮತ–ಕುಲ–ಗೋತ್ರಗಳಿಲ್ಲ
ನಿಜವಾದ ಅರಿವನ್ನು ಕುರಿತು ಆತನನ್ನು ಪ್ರಶ್ನಿಸು,
ಅವನು ಯಾವ ಜಾತಿಯವನೆಂದು ಕೇಳಬೇಡ,
ಅವನ ಖಡ್ಗದ ಬೆಲೆ ಏನೆಂದು ಕೇಳು,
ಆ ಖಡ್ಗವನ್ನು ಮರೆಮಾಡಿರುವ ಒರೆಯ ಬೆಲೆ
ಏನೆಂದು ಕೇಳಬೇಡ.

–ಲಲ್ಲಯೋಗೀಶ್ವರಿ

ಅದೇ ದೇವಸ್ಥಾನಗಳು, ಅದೇ ಮಸೀದಿಗಳು.
ಹಿಂದೂಗಳಾಗಲಿ ಮುಸ್ಲಿಮರಾಗಲಿ
ದೇವರನ್ನಾರಾಧಿಸುವ ರೀತಿ ಒಂದೇ.
ಯಾಕೆಂದರೆ ಜಗತ್ತಿನಾದ್ಯಂತ ಇರುವ ಜನರೆಲ್ಲ ಒಂದೇ,
ಅವರವರ ವೇಷಭೂಷಣ ಬೇರೆ.
ಅವರಿಗೆಲ್ಲ ಒಂದೇ ಥರ ಕಣ್ಣು, ಒಂದೇ ಥರ ಶರೀರ,
ಅದೇ ಮೈಕಟ್ಟು, ಅದೇ ನೆಲ, ಅದೇ ನೀರು, ಅದೇ ಗಾಳಿ.
ಅದೇಪುರಾಣ, ಅದೇ ಕುರ್‌ಆನ್, ಅದೇ ಅಲ್ಲಾ,
ಅದೇ ಅಭೇಕಾ
ನನಗಂತೂ ಯಾವ ವ್ಯತ್ಯಾಸವೂ ಕಾಣದು.

–ಗುರುಗೋವಿಂದ ಸಿಂಗ್

ಇದು ಒಂದು ಪ್ರಪಂಚ. ನಾವಿರುವ ಭೂಮಿ ಒಂದೇ ಮನೆ. ಅದರಲ್ಲಿ ಬದುಕುವ ಹಕ್ಕು ಕ್ರಿಮಿಕೀಟಗಳಿಂದ ಹಿಡಿದು ಮನುಷ್ಯ ಪ್ರಾಣಿಯ ತನಕ ಎಲ್ಲರಿಗೂ ಇದೆ. ನಮ್ಮೆಲ್ಲರನ್ನು ಸೃಷ್ಟಿಸಿದ್ದು ಅದಾವುದೋ ಒಂದು ಶಕ್ತಿ. ನಮ್ಮ ಇಚ್ಛೆಗಳು ನಮಗೆ ತಿಳಿದಿದ್ದರೂ, ಅದರ ಇಚ್ಛೆಯೇನೆಂದು ತಿಳಿದಿದ್ದೇವೆಂಬುದು ಜಂಭದ ಮಾತು. ಆ ಜಂಭವನ್ನು ಬಿಟ್ಟು ಬಾಳಬೇಕು. ಮನುಷ್ಯ ಕುಲದ ಹಿತಕ್ಕಾಗಿ ಮಾತ್ರವಲ್ಲ, ಎಲ್ಲ ಜೀವಿಗಳ ಹಿತಕ್ಕಾಗಿಯೂ ಬಾಳುವ ರೀತಿಯನ್ನು ಕಲಿತರೆ, ಆಗ ನಾವು ನಾಗರಿಕತೆಯ ಹೊಸ್ತಿಲನ್ನು ದಾಟಿದ ಮನುಷ್ಯರೆನಿಸುತ್ತೇವೆ.

**–ಶಿವರಾಮ ಕಾರಂತ**

ಪ್ರತಿಯೊಬ್ಬ ವ್ಯಕ್ತಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಇರುವಂಥವನೆಂಬುದು ನಿಜವಾದರೂ, ಈ ಜಗತ್ತಿನಲ್ಲಿ ಅವನೊಬ್ಬನೇ ಇರುವುದಿಲ್ಲ; ಅವನಂಥವರೇ ಕೋಟ್ಯಂತರ ಜನವೂ ಇರುತ್ತಾರೆ. ಯಾವಾಗ ವ್ಯಕ್ತಿ ಉಳಿದ ವ್ಯಕ್ತಿಗಳನ್ನೆಲ್ಲ ಮರೆತು ತಾನೊಬ್ಬನೇ ಇದ್ದರೆ ಹೇಗೋ ಹಾಗೆ ವರ್ತಿಸಲು ಶುರು ಮಾಡುತ್ತಾನೋ, ಆಗ ಅವನು ಸಮಾಜಕ್ಕೆ ಅನಿಷ್ಟಕಾರಿ ಆಗುತ್ತಾನೆ. ಅದೇ ರೀತಿ ಒಂದು ಜಾತಿಯ ಜನ, ತಮ್ಮ ಸುತ್ತಲೂ ಇನ್ನೂ ಅನೇಕ ಜಾತಿಗಳಿವೆ ಎಂಬುದನ್ನು ಮರೆಯುತ್ತಾರೋ, ಆಗ ಜಾತಿ ಭಾವನೆ ಮಾರಕವಾಗುತ್ತದೆ. ನಮ್ಮಲ್ಲಿ ಜಾತಿಭಾವನೆ ಈ ರೀತಿ ರೂಪುಗೊಳ್ಳುತ್ತಿರುವುದರಿಂದಲೇ ಅದು ಅನಿಷ್ಟ ವೆಂದು ನಮಗೆ ತೋರುವುದು.

**–ಎಂ. ಗೋಪಾಲಕೃಷ್ಣ ಅಡಿಗ**

ಮತ ಗುಂಪು ಕಟ್ಟುವ ವಿಷಯುವಾಗಬಾರದು.
ಯಾರೂ ಯಾವ ಒಂದು ಮತಕ್ಕೂ ಸೇರದೆ,
ಪ್ರತಿಯೊಬ್ಬನೂ ತಾನು ಕಂಡುಕೊಳ್ಳುವ 'ತನ್ನ' ಮತಕ್ಕೆ
ಸೇರಬೇಕು. ಆಂದರೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ
ಅಷ್ಟೇ ಸಂಖ್ಯೆಯು ಮತಗಳಿರುವಂತಾಗುತ್ತದೆ.
ಯಾರೊಬ್ಬರೂ ಇನ್ನೊಬ್ಬರ ಮತಕ್ಕೆ ಸೇರಿ, ಗುಂಪು ಕಟ್ಟಿ
ಜಗಳ ಹಚ್ಚುವಂತಾಗಬಾರದು

**–ಕುವೆಂಪು**

ಜಾತಿಮತದ ಗುಹೆಗಳಿಂದ ಹೊರಬನ್ನಿರಿ ಬಯಲಿಗೆ,
ಕೃತಕ ತಿಮಿರದಾಳದಿಂದ ವಿಸ್ತಾರದ ಬೆಳಕಿಗೆ,
ಸೇರಿಕೊಳಿ, ಕೂಡಿಕೊಳಿ, ಮುನ್ನುಗ್ಗುವ ಸಾಲಿಗೆ,
ಕತ್ತಲೊಡನೆ ಹೂಡಿದ ಈ ಉತ್ಸಾಹದ ದಾಳಿಗೆ
ಕೂಡಿಸಿರೆದೆ ಕೊರಲುಗಳನು ಹೊಸಬಾಳಿನ ಹಾಡಿಗೆ.

**–ಎಂ. ಗೋಪಾಲಕೃಷ್ಣ ಅಡಿಗ**

ಹಿಂದೂ ಸಮಾಜದ ನವೀಕರಣದ ನಾಂದಿ ಎಂದರೆ ಜಾತಿ ವ್ಯವಸ್ಥೆಯು ನಾಶ.

ಆ ವ್ಯವಸ್ಥೆಗೆ ಶಾಸ್ತ್ರಗಳೇ ಆಧಾರವಾಗಿರುವುದರಿಂದ ಮೊದಲು ಅವುಗಳನ್ನು ಕುರಿತ ಮೂಢನಂಬಿಕೆಗಳನ್ನು ಮಣ್ಣು ಗೂಡಿಸಬೇಕು.

ಶ್ರುತಿ–ಸ್ಮೃತಿಗಳು ಪವಿತ್ರವೆಂಬ ಭಾವನೆ ತೊಲಗಬೇಕು. ಪರಂಪರಾಗತವಾದ ಪೌರೋಹಿತ್ಯವನ್ನು ತಪ್ಪಿಸಿ ಆ ವೃತ್ತಿಯುನ್ನು ಸಾರ್ವಜನಿಕಗೊಳಿಸಬೇಕು.

**– ಡಾ. ಬಿ.ಆರ್. ಅಂಬೇಡ್ಕರ್**

ಇತಿಹಾಸವನ್ನು ನಾವು ಹೇಗೆ ನೋಡುತ್ತೇವೆ ಎಂಬುದು ಮುಖ್ಯವಾದ ಸಂಗತಿಯಾಗಿದೆ. ಕಾರಣಗಳು ಏನೇ ಇರಲಿ, ನಾವು ಹಿಂದೂ ಮುಸಲ್ಮಾನ ಸಮಸ್ಯೆಯನ್ನು ಕುರಿತು ಮಾತನಾಡುವಾಗ, ದಂತಗೋಪುರದಲ್ಲಿ ಕುಳಿತು ಚರ್ಚೆ ಮಾಡುವುದಿಲ್ಲ. ನಾವು ಅರಬಸ್ತಾನದ ಮುಸಲ್ಮಾನರನ್ನು ಕುರಿತು ಮಾತನಾಡದೆ ಭಾರತದ ಮುಸಲ್ಮಾನರನ್ನು ಕುರಿತು ಮಾತನಾಡುತ್ತೇವೆ. ಭಾರತದ ಮುಸಲ್ಮಾನರು ಹಿಂದೂಗಳ ಸೋದರರೇ ಹೊರತು ಅರಬಸ್ತಾನದ ಮುಸಲ್ಮಾನರ ಸೋದರರಲ್ಲ. ಒಂದು ವೇಳೆ ಈ ಸೋದರ ಸಂಬಂಧವೇ ಇಲ್ಲವಾದರೆ ಇವರಲ್ಲಿ ಅರಿವು ಮೂಡುವುದು ಸಾಧ್ಯವೇ ಇಲ್ಲ.

**–ರಾಮಮನೋಹರ ಲೋಹಿಯಾ**

ನಾನು ಹಿಂದುವೂ ಅಲ್ಲ; ಮುಸ್ಲಿಮನೂ ಅಲ್ಲ
ನನ್ನ ದೇಹ ಮತ್ತು ಆತ್ಮಗಳು
ಅಲ್ಲಾ ಮತ್ತು ರಾಮರಿಗೆ ಸೇರಿದವುಗಳು

**–ಗುರು ಅರ್ಜುನ್**

ಕೊನೆಗೊಂಡಿತೂ ಹಿರೋರ್ವರ ಗರ್ವದ ಕಾಲ
ಇದು ಸರ್ವರ ಕಾಲ
'ಸರ್ವೋದಯ' 'ಸರ್ವೋದಯ'
ಸರ್ವೋದಯ ಯುಗಮಂತ್ರ
ಸರ್ವೋದಯವೇ ಸ್ವಾತಂತ್ರ್ಯದ ಶ್ರೀ ತಂತ್ರ.

**–ಕುವೆಂಪು**

ನಾವ್ಹೂ ಹಿಂದೂಗಳೂ ಅಲ್ಲ, ಮುಸ್ಲಿಮರೂ ಅಲ್ಲ; ಬನ್ನಿ
ನಿಮ್ಮ ಕುಲದ ಹಮ್ಮುಗಳನ್ನು ಕಿತ್ತೆಸೆದು ಬನ್ನಿ,
ಒಟ್ಟಿಗೆ ಕೂತು ನೂಲು ತೆಗೆಯೋಣ.
ನಾನು ಸುನ್ನಿಯೂ ಅಲ್ಲ, ಷಿಯಾನೂ ಅಲ್ಲ; ಯಾಕೆಂದರೆ
ನಾನು ಸಂಪೂರ್ಣ ಶಾಂತಿ ಹಾಗೂ ಐಕ್ಯತೆಯ
ದಾರಿಯನ್ನು ಹಿಡಿದಿದ್ದೇನೆ.
ನಾನು ಬಡವನೂ ಅಲ್ಲ, ಧನಿಕನೂ ಅಲ್ಲ,
ನಾನು ದಿಗಂಬರನೂ ಅಲ್ಲ, ವಸ್ತ್ರ ವಿಲಾಸಿಯೂ ಅಲ್ಲ,
ನಾನು ದುಃಖಿಯೂ ಅಲ್ಲ, ನಿರಾತಂಕನೂ ಅಲ್ಲ,
ಏಕಾಂಗಿಯೂ ಅಲ್ಲ, ಸ್ಥಿರನಾದವನೂ ಅಲ್ಲ,
ಪಾಪಿಯೂ ಅಲ್ಲ, ಶುದ್ಧನೂ ಅಲ್ಲ,
ನಾನು ಸದಾಚಾರಿಯೂ ಅಲ್ಲ, ದುರಾಚಾರಿಯೂ ಅಲ್ಲ.
ಸದಾ ಆ ಪರಾತ್ಪರದ ಅನುಭವದಲ್ಲಿ ಬದುಕುವ ನಾನು
ಹಿಂದೂಗಳಿಂದಲೂ ಮುಸ್ಲಿಮರಿಂದಲೂ – ದೂರವೇ
ಇದ್ದೇನೆ.

**–ಬುಲ್ಲಾಹ ಷಾ**
**(ಪಂಜಾಬಿ ಸೂಫೀಸಂತ)**

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆ
ಎಲ್ಲರೊಳಗೊಂದಾಗು – ಮಂಕುತಿಮ್ಮ

**–ಡಿ.ವಿ.ಜಿ.**

ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕ ಹಿತಕೆ
ಆ ಮತದ ಈ ಮತದ ಹಳೆಮತದ ಸಹವಾಸ
ಸಾಕಿನ್ನು ಸೇರಿರೈ ಮನುಜಮತಕೆ
ಓ ಬನ್ನಿ ಸೋದರರೆ ವಿಶ್ವಪಥಕೆ

– ಕುವೆಂಪು

ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯ ದೇವಿ ನಮಗಿಂದು ಪೂಜಿಸುವ ಬಾರ.

ಶತಮಾನಗಳು ಬರಿಯ ಜಡಶಿಲೆಯ ಪೂಜಿಸಾಯ್ತು
ಹಾವುಗಳಿಗೆ ಹಾಲೆರೆದು ಪೋಷಿಸಾಯ್ತು!
ಬಿಸಿಲು ಮಳೆಗಾಳಿ ಬೆಂಕಿಯನೆಲ್ಲ ಬೇಡಿಯಾಯ್ತು
ದಾಸರನು ಪೂಜಿಸಿಯೆ ದಾಸ್ಯವಾಯ್ತು!

ಗುಡಿಯೊಳಗೆ ಕಣ್ ಮುಚ್ಚಿ ಬೆಚ್ಚಗಿರುವರನೆಲ್ಲ
ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ
ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು
ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು!

– ಕುವೆಂಪು

## — ೭ —

ಜ್ಞಾನಕ್ಕೆ ಸರಿಸಮನಾದ ಪವಿತ್ರ ವಸ್ತು
ಈ ಜಗತ್ತಿನಲ್ಲಿ ಬೇರೊಂದಿಲ್ಲ.

**–ಭಗವದ್ಗೀತಾ**

ನಾವು ಜತೆಗೂಡಿ ನಡೆಯೋಣ
ಒಳ್ಳೆಯ ಮನಸ್ಸಿನಿಂದ ಮಾತನಾಡಿ
ಒಬ್ಬರನ್ನೊಬ್ಬರು ತಿಳಿದುಕೊಳ್ಳೋಣ.

**–ಯಜುರ್ವೇದ**

ಪ್ರತಿಯೊಂದು ಮಗುವೂ ಹುಟ್ಟುತ್ತಲೆ–ವಿಶ್ವಮಾನವ.
ಬೆಳೆಯುತ್ತಾ ನಾವು ಅದನ್ನು ಅಲ್ಪ ಮಾನವನನ್ನಾಗಿ
ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ
ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

**–ಕುವೆಂಪು**

ವಿದ್ಯೆಯಿಂದ ಬರುವ ತಿಳಿವಳಿಕೆ
ಧನಕನಕಾದಿಗಳಿಗಿಂತಲೂ ಶ್ರೇಷ್ಠವಾದದ್ದು.
ಯಾಕೆಂದರೆ ತಿಳಿವಳಿಕೆ ನಿನ್ನನ್ನು ಕಾಪಾಡಿದರೆ,
ಸಂಪತ್ತನ್ನು ನೀನೇ ಕಾಪಾಡಿಕೊಳ್ಳಬೇಕಾಗುತ್ತದೆ.

**–ಹಜರತ್ ಅಲಿ (ಸೂಫಿಸಂತ)**

ಗುರುಶಿಷ್ಯರಾದ ನಮ್ಮಿಬ್ಬರನ್ನೂ ಆ ಪರಮಾತ್ಮ
ಒಟ್ಟಿಗೇ ರಕ್ಷಿಸಲಿ,
ನಮ್ಮಿಬ್ಬರಿಗೂ ಒಟ್ಟಿಗೆ ವಿದ್ಯೆಯ ಫಲವು ಲಭಿಸಲಿ
ವಿದ್ಯೆಯನ್ನು ಕಲಿಯುತ್ತಾ, ಅದು ನಮ್ಮಿಬ್ಬರ
ಶಕ್ತಿಯನ್ನು ವರ್ಧಿಸಲಿ
ನಮ್ಮನ್ನದು ತೇಜಸ್ವಿಗಳನ್ನಾಗಿ ಮಾಡಲಿ
ನಾವು ಒಬ್ಬರನ್ನೊಬ್ಬರು ದ್ವೇಷಿಸದಂತಾಗಲಿ

**–ಕಠೋಪನಿಷತ್**

ನಮಗೆ ಬೇಕಾಗಿರುವುದು ತನ್ನ ಸ್ವಾರ್ಥಪರ ಭಾವನೆಗಳನ್ನು ಮೀರಿ ಯೋಚಿಸಬಲ್ಲ ಸುಸಂಸ್ಕೃತ ಮನುಷ್ಯರು. ತನ್ನ ಹಿತವನ್ನು ಬಲಿಗೊಡದೆ ಸಮಷ್ಟಿ ಜೀವನದ ಅಭ್ಯುದಯಕ್ಕಾಗಿಯೂ ದುಡಿಯಬಲ್ಲವರು; ಸಾಹಿತ್ಯ ಕಲೆ ಸಂಗೀತ ಮುಂತಾದ ಸಂಸ್ಕೃತಿ ಸಾಧನಗಳಿಗೆ ಮುಕ್ತವಾಗಿರುವ ಹೃದಯಗಳು. ಜೀವನ್ನದ ಅನಂತ ಸಂಭಾವ್ಯತೆ, ಸಾಧ್ಯತೆಗಳನ್ನು ಗುರುತಿಸಿ ಉದಾರಮತಿಗಳಾಗಿದ್ದು, ತನ್ನದೇ ಸರಿ ತಾನು ಕಂಡದ್ದೇ ಸತ್ಯ ಎಂದು ಅಹಂಕಾರಮೂರ್ತಿಗಳಾಗದ, ಆದರೆ ತನ್ನ ಅನುಭವಕ್ಕೆ ತೀರ್ಮಾನಕ್ಕೆ ವಿರುದ್ಧವಾದುದನ್ನು ಎಂದೂ ಒಪ್ಪದ ಧೀರ ಗಂಭೀರ ಸಹಿಷ್ಣು ವ್ಯಕ್ತಿಗಳು. ಯಾವ ಶಿಕ್ಷಣ ಕ್ರಮದಿಂದ ಇದು ಸಾಧಿಸುವುದಿಲ್ಲವೋ, ಇದನ್ನು ಸಾಧಿಸುವ ಪ್ರಯತ್ನವೂ ನಡೆಯುವುದಿಲ್ಲವೋ ಅದನ್ನು ಒಂದು ಶಿಕ್ಷಣ ಕ್ರಮ ಎನ್ನಲು ಸಾಧ್ಯವೇ ಇಲ್ಲ.

**–ಎಂ. ಗೋಪಾಲಕೃಷ್ಣ ಅಡಿಗ**

ವಿದ್ಯೆಯಿಂದ ವಿವೇಕ ಉಂಟಾಗುತ್ತದೆ ಎಂದು ಹೇಳಲಾಗಿದೆ. ವಿಮರ್ಶಾರೂಪಿಯಾದ ವಿದ್ಯೆಯು, ಯಾವುದು ಸರಿಯಾದದ್ದು ಎಂಬುದನ್ನು ತೋರಿಸುವುದಲ್ಲದೆ, ತಪ್ಪು ಮಾಡುವುದರಿಂದಲೂ ನಮ್ಮನ್ನು ಪಾರು ಮಾಡಬಲ್ಲದು. ಆದ ಕಾರಣ ನಮ್ಮ ಯುವಕ-ಯುವತಿಯರು, ತಮಗೆ ನಿಜ ವಾಗಿಯೂ ಏನು ಬೇಕೆಂಬುದನ್ನು ತಾವೇ ಕಂಡುಕೊಳ್ಳಬೇಕು. ಶತಶತಮಾನಗಳ ಕಾಲ ಯಾವ ಉದ್ದೇಶವು ಸಾಧುವೆಂದು ತೋರಿತ್ತೋ ಅದು, ವೇಗವಾಗಿ ಬದಲಾಗುತ್ತಿರುವ ನಮ್ಮ ದೇಶದ ಹಾಗೂ ಜಗತ್ತಿನ ಈ ಹೊತ್ತಿನ ಪರಿಸ್ಥಿತಿಗೆ ಸಾಧುವೆಂದು ತೋರದೆ ಹೋಗಬಹುದು. ಆದಕಾರಣ ನಮ್ಮ ತರುಣರು ತಮ್ಮ ಜನಾಂಗದ ಆಶೋತ್ತರಗಳಿಗೆ ಅನುಗುಣವಾಗಿ, ತಮ್ಮ ಧ್ಯೇಯೋದ್ದೇಶಗಳನ್ನು ಹೊಸದಾಗಿ ರೂಪಿಸಿಕೊಂಡು ಅವುಗಳನ್ನು ತಮ್ಮ ಬದುಕಿಗೆ ಅಳವಡಿಸಿಕೊಳ್ಳಬೇಕಾಗಿದೆ.

**-ಡಾ.ಎಸ್. ರಾಧಾಕೃಷ್ಣನ್**

ಹಸಿವು ಮತ್ತು ಮೌಢ್ಯದಲ್ಲಿ ಬಿದ್ದಿರುವ ಲಕ್ಷಾಂತರ ಜನಸಾಮಾನ್ಯರ ದುಡಿಮೆಯಿಂದಲೇ ಶಿಕ್ಷಣವನ್ನು ಪಡೆದು, ಅವರ ಕಡೆಗೆ ಒಂದಿನಿತೂ ಗಮನವನ್ನು ಯಾವನು ಕೊಡುವುದಿಲ್ಲವೋ ಅಂಥವನನ್ನು ನಾನು ದ್ರೋಹಿ ಎಂದು ಕರೆಯುತ್ತೇನೆ.

**-ಸ್ವಾಮಿ ವಿವೇಕಾನಂದ**

ವಿಶ್ವವಿದ್ಯಾಲಯವು, ಮಾನವೀಯತೆಗೆ, ಸಹನೆಗೆ, ವೈಚಾರಿಕತೆಗೆ, ಪ್ರಗತಿಗೆ, ಸತ್ಯಾನ್ವೇಷಣೆಯ ಸಾಹಸಕ್ಕೆ, ಸಂಕೇತವಾಗಿದೆ. ಅದು ಉನ್ನತವಾದ ಉದ್ದೇಶಗಳಿಗಾಗಿ ಮಾನವ ಜನಾಂಗವು ಕೈಕೊಳ್ಳುವ ಯಾತ್ರೆಯ ಸಂಕೇತವೂ ಹೌದು. ವಿಶ್ವವಿದ್ಯಾಲಯುಗಳು ತಮ್ಮ ಕರ್ತವ್ಯಗಳನ್ನು ಸಮರ್ಪಕವಾಗಿ ನೆರವೇರಿಸಬಲ್ಲವಾದರೆ, ಅದು ರಾಷ್ಟ್ರಕ್ಕೆ ಹಾಗೂ ಜನತೆಗೆ ಕ್ಷೇಮ. ಒಂದು ವೇಳೆ ಜ್ಞಾನದೇಗುಲಗಳಾದ ವಿಶ್ವವಿದ್ಯಾಲಯುಗಳೇ ಸಂಕುಚಿತ ಮತಾಂಧತೆಯ ಹಾಗೂ ಕ್ಷುದ್ರೋದ್ದೇಶಗಳ ನೆಲೆಮನೆಯಾದರೆ ರಾಷ್ಟ್ರವು ಅಭಿವೃದ್ಧಿ ಹೊಂದೀತು ಹೇಗೆ ? ಜನದ ಬದುಕು ಎತ್ತರವಾಗಿ ಬೆಳೆದೀತು ಹೇಗೆ ?

**–ಜವಾಹರಲಾಲ್ ನೆಹರೂ**

ನಾವು ಈ ಜಗತ್ತಿಗೆ ಬಂದಿರುವುದು ಕೇವಲ ಅದನ್ನು ತಿಳಿದುಕೊಳ್ಳುವುದಕ್ಕಾಗಿ ಅಲ್ಲ. ಅದನ್ನು ಒಪ್ಪಿಕೊಳ್ಳುವುದಕ್ಕೆ ಜಗತ್ತಿನ ಬಗ್ಗೆ ತಿಳಿವಳಿಕೆ ಪಡೆಯುವುದರಿಂದ ನಾವು ಶಕ್ತಿವಂತರಾಗಬಹುದು. ಆದರೆ ಸಹಾನುಭೂತಿಯಿಂದ ಅದರ ಜತೆ ಬೆರೆಯುವುದರಿಂದ ಮಾತ್ರ ನಾವು ಪೂರ್ಣರಾಗುತ್ತೇವೆ. ಅತ್ಯುನ್ನತವಾದ ಶಿಕ್ಷಣ ಯಾವುದೆಂದರೆ, ಯಾವುದು ಜಗತ್ತಿನ ಬಗ್ಗೆ ಕೇವಲ ತಿಳಿವಳಿಕೆಯನ್ನು ಕೊಡುವುದೋ ಅದಲ್ಲ. ಯಾವುದು ಜಗತ್ತಿನ ಅಸ್ತಿತ್ವದೊಂದಿಗೆ ನಮ್ಮನ್ನು ಸಾಮರಸ್ಯಗೊಳಿಸುವುದೋ ಅದು.

**–ರವೀಂದ್ರನಾಥ ಠಾಕೂರ್**

## — ೮ —

ಉದ್ಯೋಗಿಯಾದ ಪುರುಷಸಿಂಹನಿಗೆ
ಸಂಪತ್ತು ತಾನಾಗಿಯೇ ಒದಗುತ್ತದೆ.
ದೈವವೇ ಕರುಣಿಸಬೇಕು ಎನ್ನುವುದು ಕೈಲಾಗದವರ ಮಾತು.
ದೈವವನ್ನು ಬದಿಗೊತ್ತಿ ಸ್ವಸಾಮರ್ಥ್ಯದಿಂದ
ಕಾರ್ಯಪ್ರವೃತ್ತನಾಗು.
ಪ್ರಯತ್ನ ಮಾಡಿಯೂ ಫಲ ದೊರಕದೆ ಹೋದರೆ ಯಾರ
ತಪ್ಪು ?

**– ಘಟಕರ್ಪರ ಕಾವ್ಯ**

ಕೈಯಲ್ಲಾಗದ ಹೇಡಿಯು ದೈವವನ್ನು ನಂಬುತ್ತಾನೆ.
ವೀರರು–ಧೀರರು ದೈವವನ್ನು ಲೆಕ್ಕಿಸುವುದಿಲ್ಲ.
ಯಾರು ತನ್ನ ಪೌರುಷದಿಂದ ದೈವವನ್ನೂ
ನಿರಾಕರಿಸಬಲ್ಲನೋ, ಅವನು ಎಂದೂ ಕಷ್ಟಕ್ಕೆ
ಒಳಗಾಗುವ ಸಾಧ್ಯತೆಯಿಲ್ಲ. ದೈವವು ಕೂಡ
ಅವನ ಕಾರ್ಯವನ್ನು ಕೆಡಿಸುವುದಿಲ್ಲ

**– ರಾಮಾಯಣ**

ಉದ್ಯಮಶೀಲತೆ, ಸಾಹಸ, ಧೈರ್ಯ, ಬುದ್ಧಿ,
ಶಕ್ತಿ, ಪರಾಕ್ರಮ – ಈ ಆರೂ ಯಾರಲ್ಲಿರುತ್ತವೋ
ಅವರಿಗೆ ದೈವವೆ ಬೆಂಬಲಕ್ಕೆ ನಿಲುತ್ತದೆ

**– ವಿಕ್ರಮಚರಿತ**

ಒಂದೇ ಚಕ್ರದಿಂದ ಹೇಗೆ ರಥ ಚಲಿಸಲಾರದೋ ಹಾಗೆ
ಪುರುಷಪ್ರಯತ್ನವಿಲ್ಲದೆ ದೈವ ಒಲಿಯಲಾರದು.

–ಯಾಜ್ಞವಲ್ಕ್ಯಸ್ಮೃತಿ

ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲ ಸಂಗಮದೇವಾ.

–ಬಸವಣ್ಣ

ಸಾರಿನ ಮಡಕೆಯೊಳಗೆ ಅದ್ದಿದ್ದರೂ
ಸೌಟು ಸಾರಿನ ರುಚಿಯನ್ನು ತಿಳಿಯಲಾರದು.
ಮೂರ್ಖರು, ಜ್ಞಾನರ ಜತೆಗೆ ಎಷ್ಟು ಕಾಲ ಇದ್ದರೂ
ಧರ್ಮವನ್ನು ತಿಳಿಯಲಾರರು.

–ಬುದ್ಧ (ದಮ್ಮಪದ)

ಯಾರ ನಡವಳಿಕೆಯನ್ನಾಗಲಿ ಕುರಿತು
ನೀವು ತೀರ್ಪು ಕೊಡಲು ಹೋಗಬೇಡಿ.
ಯಾಕೆಂದರೆ, ಇನ್ನೊಬ್ಬರನ್ನು ಕುರಿತು
ನೀವು ಕೊಡುವ ತೀರ್ಪು
ನಿಮ್ಮನ್ನೆ ಕುರಿತ ತೀರ್ಮಾನವೂ ಆಗುತ್ತದೆ.

–ಬೈಬಲ್

ನನ್ನ ನಮ್ರವಾದ ತಿಳಿವಳಿಕೆಯೇನೆಂದರೆ:
ಮಹತ್ತಾದುದುದೇನನ್ನಾದರೂ ಸಾಧಿಸಬೇಕಾದರೆ
ನಿರ್ಭಯತೆಯೊಂದೇ ಮೊಟ್ಟ ಮೊದಲ ಹಾಗೂ
ಅತ್ಯಗತ್ಯವಾದ ಸಾಧನ.

**–ಮಹಾತ್ಮಾ ಗಾಂಧೀ**

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು.
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮದೇವನೆಂತೊಲಿವನಯ್ಯಾ ?

**–ಬಸವಣ್ಣ**

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಗಂಡೂ ಅಲ್ಲ, ಹೆಣ್ಣೂ ಅಲ್ಲ ಕಾಣಾ ರಾಮನಾಥ

**–ಜೇಡರ ದಾಸಿಮಯ್ಯ**

ಎಲ್ಲಿ ಸ್ತ್ರೀಯರನ್ನು ಗೌರವದಿಂದ ಕಾಣಲಾಗುತ್ತದೆಯೋ
ಅಲ್ಲಿ ದೇವತೆಗಳು ಸಂತೋಷಪಡುತ್ತಾರೆ.

**–ಮನು**

ಹೆಣ್ಣನ್ನು ದುರ್ಬಲಳೆಂದು ಹೇಳುವುದು
ಆಕೆಗೆ ಅವಮಾನ ಮಾಡಿದಂತೆ.
ಅದು, ಪುರುಷರು ಮಹಿಳೆಯರಿಗೆ ಮಾಡುವ ಅನ್ಯಾಯ.
ಬಲ ಎನ್ನುವುದರ ಅರ್ಥ, ಪಶುಬಲ ಎನ್ನುವುದಾದರೆ
ಹೆಣ್ಣು ಗಂಡಿಗಿಂತ ಕಡಿಮೆ ಪಶುಬಲವುಳ್ಳವಳು.
ಆದರೆ ಬಲ ಎಂಬುದು, ನೈತಿಕ ಬಲ ಎನ್ನುವುದಾದರೆ,
ಹೆಣ್ಣು, ಗಂಡಿಗಿಂತ ಅತ್ಯಂತ ಶ್ರೇಷ್ಠಳಾದವಳು.

**–ಮಹಾತ್ಮಾ ಗಾಂಧೀ**

ಹೆಣ್ಣು ಪುರುಷನ ಸಂಗಾತಿ. ಗಂಡಸಿಗಿರುವಷ್ಟೆ
ಮಾನಸಿಕ ಸಾಮರ್ಥ್ಯಗಳು ಅವಳಿಗೆ ದತ್ತವಾಗಿವೆ.
ಪುರುಷರು ಕೈಕೊಳ್ಳುವ ಸಮಸ್ತ ಚಟುವಟಿಕೆಗಳಲ್ಲಿಯೂ
ಆಕೆಗೆ ಪಾಲುಗೊಳ್ಳುವ ಅಧಿಕಾರವಿದೆ ಮತ್ತು
ಹಾಗೆ ಪಾಲುದಾರಳಾಗಲು, ಸ್ವಾತಂತ್ರ್ಯ ಹಾಗೂ ಸಲಿಗೆಗಳಿವೆ
ಪುರುಷನಿಗೆ ತನ್ನ ಕಾರ್ಯಕ್ಷೇತ್ರದಲ್ಲಿ
ಯಾವ ಕೇಂದ್ರಸ್ಥಾನವಿದೆಯೊ
ಹಾಗೆಯೆ ಮಹಿಳೆಗೆ ತನ್ನ ಕಾರ್ಯಕ್ಷೇತ್ರದಲ್ಲಿ
ಕೇಂದ್ರಸ್ಥಾನವಿದೆ.
ಇದು ಕಲಿಕೆಯಿಂದ ಬರಬೇಕಾದ ಸ್ಥಿತಿಯಲ್ಲ,
ಸಹಜವಾಗಿಯು ಇರಬೇಕಾದದ್ದು ಹಾಗೆ.
ಆದರೆ ದುಷ್ಟ ಸಂಪ್ರದಾಯದ ಹಾಗೂ ಬಲಪ್ರಯೋಗದ
ಕಾರಣದಿಂದ, ಎಂಥ ಮೂರ್ಖರೂ ನಿಷ್ಪ್ರಯೋಜಕರೂ
ಆದ ಪುರುಷರು ಮಹಿಳೆಯರ ಮೇಲೆ
ತಮ್ಮ ಹೆಚ್ಚುಗಾರಿಕೆಯನ್ನು ಸ್ಥಾಪಿಸಲು ಸಾಧ್ಯವಾಗಿದೆ.
ಅಂಥ ಹೆಚ್ಚುಗಾರಿಕೆಗೆ ಪುರುಷರು ಅರ್ಹರೇನೂ ಅಲ್ಲ.

**–ಮಹಾತ್ಮಾ ಗಾಂಧೀ**

— ೬ —

ಸತ್ಯವೊಂದೇ ಗೆಲ್ಲುತ್ತದೆ
ಸುಳ್ಳಲ್ಲ.

—ಮುಂಡಕೋಪನಿಷತ್

ಪರೋಪಕಾರವೇ ಪುಣ್ಯ
ಪರಪೀಡನೆಯೇ ಪಾಪ.

—ಲೋಕೋಕ್ತಿ

ಸತ್ಯವನ್ನು ನುಡಿ, ಧರ್ಮದಲ್ಲಿ ನಡೆ
ಅಧ್ಯಯನದಲ್ಲಿ ಅಪ್ರಮತ್ತನಾಗಬೇಡ
ತಾಯಿಯನ್ನು ದೇವರೆಂದು ಕಾಣು
ತಂದೆಯನ್ನು ದೇವರೆಂದು ಕಾಣು
ಆಚಾರ್ಯರನ್ನು ದೇವರೆಂದು ಕಾಣು
ಅತಿಥಿಗಳನ್ನು ದೇವರೆಂದು ಕಾಣು
ಯಾವ ಕರ್ಮಗಳು ನಿಂದ್ಯವಲ್ಲವೋ
ಅವುಗಳನ್ನು ಮಾತ್ರ ಮಾಡತಕ್ಕದ್ದು,
ನಿಂದ್ಯವಾದವುಗಳನ್ನು ಮಾಡಕೂಡದು.

—ತೈತ್ತಿರಿಯೋಪನಿಷತ್

ಸತ್ಯವನ್ನು ಹೇಳಬೇಕು
ಅದನ್ನು ಪ್ರಿಯವಾಗಿ ಹೇಳಬೇಕು
ಅಪ್ರಿಯವಾದ ಸತ್ಯವನ್ನು ಹೇಳಬಾರದು
ಹಾಗೆಯೆ ಪ್ರಿಯವಾದ ಸುಳ್ಳನ್ನೂ ಹೇಳಬಾರದು
ಇದು ಸನಾತನ ಧರ್ಮ

—ಲೋಕೋಕ್ತಿ

ಸತ್ಯವನ್ನು ನೀವು ಅಸತ್ಯದೊಡನೆ
ಕಲಬೆರಕೆ ಮಾಡಬೇಡಿರಿ.
ಹಾಗೂ, ತಿಳಿದೂ ತಿಳಿದೂ ಸತ್ಯವನ್ನು
ಮರೆಮಾಡಬೇಡಿರಿ.

**–ಕುರ್‌ಆನ್**

ಸದಾ ಪ್ರಿಯವಾಗಿ ಮಾತನಾಡುವವರು
ಸುಲಭವಾಗಿ ದೊರೆಯುತ್ತಾರೆ.
ಆದರೆ ಅಪ್ರಿಯವಾಗಿಯಾದರೂ
ಹಿತವನ್ನು ನುಡಿಯುವವರು, ಮತ್ತು
ಅದನ್ನು ಕೇಳುವವರೂ ವಿರಳ.

**–ರಾಮಾಯಣ**

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಭೋ
ಸತ್ಯವ ನುಡಿವುದೆ ದೇವಲೋಕ
ಮಿಥ್ಯವ ನುಡಿವುದೆ ಮರ್ತ್ಯಲೋಕ
ಆಚಾರವೇ ಸ್ವರ್ಗ, ಅನಾಚಾರವೇ ನರಕ
ಕೂಡಲ ಸಂಗಮದೇವಾ–ನೀವೇ ಪ್ರಮಾಣ

**–ಬಸವಣ್ಣ**

ಒಳಗೆ ಬೆಳಗುವ ಬೆಳಕ ಸರಿಪಡಿಸಿಕೊಳಬೇಕು. ಬಡವನಿಗೆ,
ಮನೆಯೊಳೇ ನಿಧಿಯೊಂದ ಹುಗಿದಿಟ್ಟು ಎಲ್ಲಿರುವುದೆಂದು
ಹೇಳಿದ ರೀತಿ, ಮನುಜನಿಗೆ ಅವನೊಳಗೆ ನಿಲಿಸಿರುವ
ಬುದ್ಧಿ. ಅದರಿಂದವನು ಒಳಗಿರುವ ಅರಿವ ಶಕ್ತಿಯು
ಅಳವನಾರೈಸಿ ಹಿರಿದಾಗುವಂತೆಸಗಬೇಕು.

**–ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಕೇಳು, ನೀನು ಕೇಳಿದ್ದು ನಿನಗೆ ದೊರೆಯುತ್ತದೆ.
ಹುಡುಕು, ನೀನು ಹುಡುಕುವುದು ನಿನಗೆ ಸಿಗುತ್ತದೆ.
ದಬ್ಬು, ನೀನು ದಬ್ಬಿದ ಬಾಗಿಲು ತೆರೆಯುತ್ತದೆ.

–ಬೈಬಲ್

ನೀನು ನಿನ್ನ ಸರಕುಗಳನ್ನು ಹಡಗಿಗೆ ತುಂಬಿಸಿದಾಗ,
ಆ ಹಡಗಿನ ಸಾಮರ್ಥ್ಯದ ಮೇಲಿನ ನಂಬಿಕೆಯಿಂದ
ಹಾಗೆ ಮಾಡುತ್ತೀಯ.

ಈ ಹಡಗು ಕಡಲ ನಡುದಾರಿಯಲ್ಲಿ ನಿನ್ನನ್ನು
ಮುಳುಗಿಸುವುದೋ ಅಥವಾ ಸುರಕ್ಷಿತವಾಗಿ ಹಿಂದಕ್ಕೆ
ಕರೆತರುವುದೋ – ನಿನಗೆ ಗೊತ್ತಿಲ್ಲ. ಈ ಹಡಗು
ಸುರಕ್ಷಿತವಾಗಿ ನಿನ್ನನ್ನು ಹಿಂದಕ್ಕೆ ತರುತ್ತದೆ ಎಂಬ ಬಗ್ಗೆ
ಖಚಿತಪಡಿಸಿಕೊಳ್ಳದೆ ಹಡಗನ್ನೆ ಹತ್ತುವುದಿಲ್ಲ ಎಂದರೆ,
ನೀನು ಈ ವ್ಯವಹಾರದಲ್ಲಿ ತೊಡಗಲಾರೆ.

ಇದು ತೇಲಿಸುವುದೋ ಮುಳುಗಿಸುವುದೋ
ಈ ಎರಡರ ರಹಸ್ಯ ನಿನಗೆ ಗೊತ್ತಿಲ್ಲ.
ಆದರೆ ಹೊಯ್ದಾಟದ ಮನಸ್ಸಿನ ವ್ಯಾಪಾರಿ,
ಗೆಲ್ಲುವುದೂ ಇಲ್ಲ, ಸೋಲುವುದೂ ಇಲ್ಲ,
ಆದರೆ ಎಲ್ಲವನ್ನೂ ಕಳೆದುಕೊಳ್ಳುತ್ತಾನೆ. ಅಷ್ಟೆ.
ಬೆಳಕು ಬೇಕಾದವನು ಬೆಂಕಿಯನ್ನೂ ಒಪ್ಪಿಕೊಳ್ಳಬೇಕು.
ಪ್ರತಿಯೊಂದು ವ್ಯವಹಾರವೂ ಭರವಸೆಯನ್ನೆ
ಅವಲಂಬಿಸಿರುವುದರಿಂದ, ಶ್ರದ್ಧೆಯೊಂದೇ
ನಿನ್ನ ಬಿಡುಗಡೆಗೆ ದಾರಿ.

–ರೂಮಿ

ಕೊಡುವುದನ್ನು ಶ್ರದ್ಧೆಯಿಂದ ಕೊಡಬೇಕು,
ಅಶ್ರದ್ಧೆಯಿಂದ ಕೊಡಬಾರದು.
ತನ್ನ ಗಳಿಕೆಗೆ ತಕ್ಕಂತೆ ಕೊಡಬೇಕು
ವಿನಯದಿಂದ ಕೊಡಬೇಕು
ಭಯ-ಭಕ್ತಿಯಿಂದ ಕೊಡಬೇಕು
ಮಿತ್ರಭಾವದಿಂದ ಕೊಡಬೇಕು.

**-ತೈತ್ತಿರೀಯೋಪನಿಷತ್**

ಲೋಕದ ಜನ ನೋಡಲಿ ಎಂದು
ದುಃಖಾರ್ತರಿಗೆ ಬಹಿರಂಗವಾಗಿ ದಾನ-ಧರ್ಮಗಳನ್ನು
ನೀಡಬೇಡ. ಹಾಗೆ ದಾನ ಕೊಡುವಾಗ ನಿನ್ನ ಮುಂದೆ
ತುತ್ತೂರಿಯೂದಿಸಬೇಡ. ನೀನು ದಾನಕೊಟ್ಟಾಗ, ನೀನು
ಬಲಗೈಯಲ್ಲಿ ಕೊಟ್ಟಿದ್ದು ನಿನ್ನ ಎಡಗೈಗೆ ಗೊತ್ತಾಗಬಾರದು.

**-ಬೈಬಲ್**

ನೀವು ಕೊಡುವ ದಾನಧರ್ಮಗಳು
ಎಲ್ಲರಿಗೂ ಕಾಣುವಂತಿದ್ದರೆ ಒಳ್ಳೆಯದೇ.
ಆದರೆ ಬಹಿರಂಗ ಜಗತ್ತಿಗೆ ಕಾಣದಂತೆ
ದಾನ-ಧರ್ಮಗಳನ್ನು ಕೊಡುವುದು ಇನ್ನೂ ಒಳ್ಳೆಯದು

**-ಕುರ್‌ಆನ್**

ಕೊಡುವುದು ಉಚಿತವೆಂದು ಅರಿತು, ಪ್ರತ್ಯುಪಕಾರದ ಅಪೇಕ್ಷೆಯನ್ನಿರಿಸಿಕೊಳ್ಳದೆ, ಕಾಲ–ದೇಶ–ಪಾತ್ರಗಳನ್ನು ಲಕ್ಷಿಸಿ ಕೊಡುವ ದಾನವು ಸಾತ್ವಿಕ ಎನ್ನಿಸಿಕೊಳ್ಳುತ್ತದೆ. ಪ್ರತ್ಯುಪಕಾರದ ಅಪೇಕ್ಷೆಯಿಂದಾಗಲಿ, ಫಲದ ಉದ್ದೇಶದಿಂದಾಗಲೀ, ಮನ ಸ್ಸಮಾಧಾನವಿಲ್ಲದೆ ನೀಡುವ ದಾನವು ರಾಜಸ ಎನ್ನಿಸಿ ಕೊಳ್ಳುತ್ತದೆ.

ದೇಶ–ಕಾಲ–ಪಾತ್ರಗಳ ಪರಿಜ್ಞಾನವಿಲ್ಲದೆ, ಆದರ ರಹಿತವೂ, ತಿರಸ್ಕಾರ ಪೂರ್ವಕವೂ ಆದ ಮನಃಸ್ಥಿತಿಯಲ್ಲಿ ನೀಡುವ ದಾನವು ತಾಮಸ ಎನ್ನಿಸಿಕೊಳ್ಳುತ್ತದೆ.

**–ಭಗವದ್ಗೀತಾ**

ಇಳೆಯಿಂದ ಮೊಳಕೆಯೊಗೆವಂದು ತಮಟೆಗಳಿಲ್ಲ
ಫಲಮಾಗುವಂದು ತುತ್ತೂರಿ ದನಿಯಿಲ್ಲ
ಬೆಳಕೀವ ಸೂರ್ಯ ಚಂದ್ರರದೊಂದು ಸದ್ದಿಲ್ಲ
ಹೊಲಿ ನಿನ್ನ ತುಟಿಗಳನು – ಮಂಕುತಿಮ್ಮ

**–ಡಿ.ವಿ.ಜಿ.**

ಉದ್ವೇಗವಿಲ್ಲದ, ಸತ್ಯವೂ ಪ್ರಿಯವೂ ಆದ ಮಾತು
ಮತ್ತು ನಿರಂತರ ಅಧ್ಯಯನ
ಇದನ್ನು ವಾಙ್ಮಯತಪಸ್ಸೆಂದು ಕರೆಯುತ್ತಾರೆ.

**–ಭಗವದ್ಗೀತಾ**

ಯಾವನು ಸಕಲ ಜೀವಿಗಳನ್ನು ತನ್ನಲ್ಲಿ ಕಾಣುವನೋ,
ತನ್ನನ್ನು ಸಕಲ ಜೀವಿಗಳಲ್ಲೂ ಕಾಣುವನೋ ಅವನು
ಯಾವುದರಲ್ಲೂ ಜುಗುಪ್ಸೆಯನ್ನು (ತಿರಸ್ಕಾರವನ್ನು)
ಹೊಂದುವುದಿಲ್ಲ.

**– ಈಶೋಪನಿಷತ್**

ಗಂಡಾಗಲೀ ಹೆಣ್ಣಾಗಲೀ
ಸತ್ಕರ್ಮನಿರತರೂ, ಸತ್ಯನಿಷ್ಠರೂ ಆಗಿದ್ದಲ್ಲಿ
ಅವರಿಗೆ ಸ್ವರ್ಗದ ಬಾಗಿಲು ತೆರೆದಿದೆ.

**– ಕುರ್‌ಆನ್**

ಯಾವುದರ ಅಭ್ಯಾಸದಿಂದ ಮನುಷ್ಯ
ಪ್ರಸನ್ನನಾಗುತ್ತಾನೆಯೋ,
ಅವನ ದುಃಖ ಕೊನೆಗೊಳ್ಳುವುದೋ,
ಯಾವುದು ಮೊದಮೊದಲು ವಿಷದಂತೆ ತೋರಿದರೂ
ಪರಿಣಾಮದಲ್ಲಿ ಅಮೃತೋಪಮವಾಗುವುದೋ,
ಆತ್ಮಜ್ಞಾನದ ಪ್ರಸನ್ನತೆಯನ್ನು ಉಂಟುಮಾಡುವುದೋ
ಆ ಸುಖವನ್ನು ಸಾತ್ವಿಕ ಎಂದು ಕರೆಯಲಾಗುತ್ತದೆ.

**– ಭಗವದ್ಗೀತಾ**

ನಿಮ್ಮಲ್ಲಿ ಯಾರಾದರೂ ತಿಳಿಗೇಡಿತನದಿಂದ
ತಪ್ಪು ಮಾಡಿದರೆ,
ಮತ್ತು ಅದಕ್ಕಾಗಿ ನೀವು ಪಶ್ಚಾತ್ತಾಪಪಟ್ಟರೆ
ಅಲ್ಲಾಹನು ಖಂಡಿತವಾಗಿಯೂ ಅವನನ್ನು ಕ್ಷಮಿಸುತ್ತಾನೆ.

**– ಕುರ್‌ಆನ್**

ಶ್ರೇಯಸ್ಸು ಬೇರೆ, ಪ್ರೇಯಸ್ಸು ಬೇರೆ.
ಭಿನ್ನ ಪ್ರಯೋಜನವುಳ್ಳವುಗಳಾಗಿ ಅವೆರಡೂ
ಮನುಷ್ಯನನ್ನು ಬಂಧನಕ್ಕೆ ಒಳಗುಪಡಿಸುತ್ತವೆ.
ಅವೆರಡರಲ್ಲಿ ಶ್ರೇಯಸ್ಸನ್ನು ಅನುಸರಿಸುವವನಿಗೆ
ಒಳ್ಳೆಯದಾಗುತ್ತದೆ: ಪ್ರೇಯಸ್ಸನ್ನು ಅನುಸರಿಸುವವನು
ಪುರುಷಾರ್ಥದಿಂದ ಚ್ಯುತನಾಗುತ್ತಾನೆ.

**–ಕಠೋಪನಿಷತ್**

ಹೇ ಪ್ರಭೂ ನೀನು ನನ್ನನ್ನು ಎಲ್ಲಿಗೆ ಕರೆದುಕೊಂಡು
ಹೋದರೂ
ನನ್ನನ್ನು ಸತ್ಯದ ಜತೆಗೆ ಕರೆದುಕೊಂಡು ಹೋಗು.
ನಾನು ಎಲ್ಲಿಗೆ ಹೋಗುವುದಾದರೂ
ಸತ್ಯದೊಂದಿಗೆ ನಾನು ಹೋಗುವಂತೆ ಮಾಡು
ನಿನ್ನ ನ್ಯಾಯಪೂರ್ಣವಾದ ಕಾನೂನನ್ನು ಜಾರಿಗೊಳಿಸಲು
ನನಗೆ ಅಧಿಕಾರ ಕೊಡು.

**–ಕುರ್‌ಆನ್**

ಅಲ್ಲಾಹನು ಸತ್ಕರ್ಮಿಗಳನ್ನು ಪ್ರೀತಿಸುತ್ತಾನೆ.

**–ಕುರ್‌ಆನ್**

ಮೊದಲು ದೇವರು ಬೆಳಕನ್ನು ಸೃಷ್ಟಿಸಿದ
ಅನಂತರ ಆ ಬೆಳಕಿನಿಂದಲೇ ನಮ್ಮನ್ನೆಲ್ಲ ಆತ ಸೃಷ್ಟಿಸಿದ.
ಇಡೀ ಜಗತ್ತೆಲ್ಲವೂ ಆ ದೇವದೇವನ ಪ್ರಕಾಶದಿಂದಲೇ
ಬಂದಿತೆಂದ ಮೇಲೆ,
ಯಾವುದನ್ನು ಒಳ್ಳೆಯದೆಂದು ಕರೆಯಲಿ ?
ಯಾವುದನ್ನು ಕೆಟ್ಟದೆಂದು ಕರೆಯಲಿ ?

**–ಕಬೀರ್**

ನಮ್ಮ ನಡವಳಿಕೆಯಿಂದ ನಾವು, ಸಂತರೋ,
ಪಾಪಿಗಳೋ ಅನ್ನುವುದು ನಿರ್ಧಾರಿತವಾಗುತ್ತದೆಯೋ
ಹೊರತು, ಬಾಯಿಮಾತಲ್ಲಿ ನಾವು ಸಂತರೆಂದೂ,
ನಾವು ಪಾಪಿಗಳೆಂದೂ ಅಂದುಕೊಳ್ಳುವುದರಿಂದ ಅಲ್ಲ.
ಬೀಜದ ಗುಣ ಹೇಗೋ, ಅದರ ಫಲ ಕೂಡಾ ಹಾಗೆಯೆ.

**–ನಾನಕ್**

ನಿನಗೊಂದು ಮಾತನ್ನು ನಾನು ಹೇಳುತ್ತೇನೆ:
ನಿನಗೆ ಮನಶ್ಶಾಂತಿ ಬೇಕಾಗಿದ್ದರೆ
ಅನ್ಯರ ದೋಷಗಳನ್ನು ಎಣಿಸಬೇಡ,
ನಿನ್ನ ದೋಷಗಳನ್ನೆ ನೀನು ಗುರುತಿಸಲು ಪ್ರಯತ್ನಿಸು.
ಇಡೀ ಜಗತ್ತನ್ನೆ ನಿನ್ನದಾಗಿಸಿಕೊಳ್ಳುವುದನ್ನು ಕಲಿ.
ಮಗೂ, ನಿನ್ನ ಪಾಲಿಗೆ ಇಲ್ಲಿರುವ ಯಾರೂ
ನಿನಗೆ ಹೊರತಾದವರಲ್ಲ, ಶತ್ರುಗಳೂ ಅಲ್ಲ.
ಇಡೀ ಲೋಕವೆ ನಿನ್ನದು.

**–ಶ್ರೀಮಾತಾ ಶಾರದಾಮಣಿದೇವಿ**

ಅಲ್ಲಾಹನು ನಿಸ್ಸಂದೇಹವಾಗಿಯೂ
ನಿಮ್ಮ ರೂಪ ಹಾಗೂ ಧನಸಂಪತ್ತನ್ನು ನೋಡುವುದಿಲ್ಲ.
ಅವನು ನಿಮ್ಮ ಮನಸ್ಸುಗಳನ್ನೂ
ಕೃತಿಗಳನ್ನೂ ನೋಡುತ್ತಾನೆ.

**–ಹ. ಅಬುಹುರ್ರೈರ (ರ) ಮುಸ್ಲಿಮ್**

ಯಾರು ನನ್ನ ಮಾತುಗಳನ್ನು ಕೇಳಿ ಅದರಂತೆ
ನಡೆಯುತ್ತಾರೋ
ಅವರನ್ನು ನಾನು ಘಟ್ಟಿ ಬಂಡೆಯ ತಳಹದಿಯ ಮೇಲೆ
ಮನೆಕಟ್ಟಿದ ಬುದ್ಧಿವಂತರಿಗೆ ಹೋಲಿಸುತ್ತೇನೆ:

ಆಗ ಭೋರೆಂಬ ಮಳೆ ಸುರಿಯಿತು
ಹೊಳೆ ಉಕ್ಕಿ ಹರಿಯಿತು
ಹತ್ತೂ ದಿಕ್ಕಿನಿಂದ ಗಾಳಿ ಬಡಿಯಿತು
ಆದರೂ ಮನೆ ಸುಭದ್ರವಾಗಿಯೆ ಇತ್ತು;
ಯಾಕೆಂದರೆ ಆ ಮನೆ ಘಟ್ಟಿ ಬಂಡೆಯ ಮೇಲೆ ನಿಂತಿತ್ತು.

ಯಾರು ನನ್ನ ಮಾತುಗಳನ್ನು ಕೇಳಿ ಅದರಂತೆ
ನಡೆಯುವುದಿಲ್ಲವೋ ಅವರನ್ನು ನಾನು,
ಮಳಲ ತಳಹದಿಯ ಮೇಲೆ ಮನೆ ಕಟ್ಟಿದ ಮೂರ್ಖರಿಗೆ
ಹೋಲಿಸುತ್ತೇನೆ:

ಆಗ ಧೋಧೋ ಎಂದು ಮಳೆ ಸುರಿಯಿತು
ಭೋರ್ಗರೆಯುವ ಹೊಳೆ ಹರಿದು ಬಂದಿತು
ಹತ್ತೂ ದಿಕ್ಕುಗಳಿಂದಲೂ ಬಿರುಗಾಳಿಗಳು ಬಡಿದವು
ಆಗ ಕಟ್ಟಿದ ಮನೆ ಥಟ್ಟನೆ ಕುಸಿಯಿತು.
ಆ ಕುಸಿತ ಮಹತ್ತಾದ ಕುಸಿತವಾಗಿತ್ತು.

-ಬೈಬಲ್

ಪರರ ವಿಚಾರಗಳನ್ನೂ,
ಪರರ ಧರ್ಮಗಳನ್ನೂ
ಮನಃಪೂರ್ವಕವಾಗಿ ಸಹಿಸಿಕೊಳ್ಳುವುದಾದರೆ
ಅದೇ ಸಂಪತ್ತು.

–ಕವಿರಾಜಮಾರ್ಗ

ಧನಕನಕಾದಿಗಳೇ ನಿಜವಾದ ಸಂಪತ್ತಲ್ಲ,
ಅಂತರಂಗದ ಶ್ರೀಮಂತಿಕೆಯೇ ನಿಜವಾದ ಸಂಪತ್ತು.

ಹಜ್ರತ್ ಅಬೂಹುರೈರ (ರ)

–ಬುಖಾರಿ

## —೧೦—

ಅಹಿಂಸೆಯೇ ಪರಮಧರ್ಮ
ಅಹಿಂಸೆಯೇ ಪರಮವಾದ ದಮ, ದಾನ, ತಪ,
ಯಜ್ಞ, ಫಲ, ಸಂಗಾತಿ ಹಾಗೂ ಸುಖ.

**–ಮಹಾಭಾರತ**

ವೈರವು ವೈರದಿಂದ ಎಂದೂ ಕಡಮೆಯಾಗುವುದಿಲ್ಲ.
ನಿರ್ವೈರದಿಂದ ಮಾತ್ರ ಅದು ಶಮನಗೊಳ್ಳುತ್ತದೆ
ಇದು ಸನಾತನ ಧರ್ಮ

**–ಬುದ್ಧ (ದಮ್ಮ ಪದ)**

ಪ್ರಿಯರೇ,
ನಾವು ಒಬ್ಬರನ್ನೊಬ್ಬರು ಪ್ರೀತಿಸೋಣ
ಆ ಪ್ರೀತಿಯು ದೇವರಿಂದ ಆಗಿದೆ
ಪ್ರೀತಿಸುವ ಪ್ರತಿಯೊಬ್ಬನೂ
ಆ ದೇವರಿಂದಲೆ ಸಂಜನಿಸಿದವನೂ
ದೇವರನ್ನು ಬಲ್ಲವನೂ, ಆಗಿದ್ದಾನೆ.
ಯಾರಲ್ಲಿ ಪ್ರೀತಿಯಿಲ್ಲವೋ ಅವನು
ದೇವರನ್ನು ಬಲ್ಲವನಲ್ಲ;
ಯಾಕೆಂದರೆ ದೇವರೆಂದರೆ ನಿಜವಾಗಿಯೂ ಪ್ರೀತಿಯ
ಪ್ರತಿರೂಪವೇ.

**–ಬೈಬಲ್**

ವಿಸ್ತರಣವೇ ಜೀವನ; ಸಂಕೋಚವೇ ಮರಣ.
ಎಲ್ಲ ಪ್ರೀತಿಯೂ ವಿಸ್ತರಣವೇ, ಎಲ್ಲ ಸ್ವಾರ್ಥವೂ ಸಂಕೋಚವೆ.
ಆದ ಕಾರಣವೆ ಪ್ರೀತಿಯೊಂದೇ ಬದುಕಿನ ಮೂಲಸೂತ್ರ.
ಯಾರು ಪ್ರೀತಿಸುತ್ತಾರೋ, ಅವರು ಮಾತ್ರ ಬದುಕಿದ್ದಾರೆ,
ಯಾರು ಸ್ವಾರ್ಥಿಗಳೋ, ಅವರು ಸಾಯುತ್ತಿದ್ದಾರೆ.

–ಸ್ವಾಮಿ ವಿವೇಕಾನಂದ

ನಾನು ಹೇಳುವುದೇನೆಂದರೆ: ನೀವು ನಿಮ್ಮ ಶತ್ರುಗಳನ್ನು ಪ್ರೀತಿಸಿರಿ. ನಿಮ್ಮನ್ನು ಹಿಂಸಿಸುವವರಿಗೆ ಒಳಿತಾಗಲೆಂದು ದೇವರನ್ನು ಪ್ರಾರ್ಥಿಸಿರಿ. ಹೀಗೆ ಮಾಡಿದರೆ ನೀವು ಆ ಪರಲೋಕ ದಲ್ಲಿರುವ ನಿಮ್ಮ ತಂದೆಗೆ ತಕ್ಕ ಮಕ್ಕಳಾಗುವಿರಿ. ಆತನು ಕೆಟ್ಟವರ ಮೇಲೆಯೂ ಒಳ್ಳೆಯವರ ಮೇಲೆಯೂ ತನ್ನ ಸೂರ್ಯ ಪ್ರಕಾಶವನ್ನು ಚೆಲ್ಲುತ್ತಾನೆ; ನೀತಿವಂತರ ಮೇಲೆಯೂ ಅನೀತಿ ವಂತರ ಮೇಲೆಯೂ ಮಳೆ ಸುರಿಸುತ್ತಾನೆ.

–ಬೈಬಲ್

ಯುದ್ಧವಿಜ್ಞಾನ ಮನುಷ್ಯನನ್ನು ಕೇವಲ ಶುದ್ಧ
ಸರ್ವಾಧಿಕಾರಕ್ಕೆ ಕರೆದೊಯ್ಯುತ್ತದೆ; ಅಹಿಂಸೆಯ
ತತ್ವಜ್ಞಾನವೊಂದೆ ಮನುಷ್ಯನನ್ನು ಶುದ್ಧ
ಜನತಂತ್ರದೆಡೆಗೆ ಒಯ್ಯಲು ಸಮರ್ಥವಾಗಿದೆ.

–ಮಹಾತ್ಮಾ ಗಾಂಧೀ

ನಾನು ದಾರ್ಶನಿಕನಲ್ಲ; ನಾನೊಬ್ಬ ಪ್ರಾಯೋಗಿಕ
ಆದರ್ಶವಾದಿ. ಅಹಿಂಸೆಯ ಪಾಲನೆ ಎನ್ನುವುದು ಕೇವಲ
ಋಷಿಗಳ ಹಾಗೂ ಸಂತರ ಧರ್ಮ
ಎಂದು ನಾನು ತಿಳಿದಿಲ್ಲ.
ಅದು ಸಾಮಾನ್ಯರ ಧರ್ಮ ಕೂಡಾ.
ಹಿಂಸೆ ಎನ್ನುವುದು ಮೃಗಗಳ ಧರ್ಮವಾದರೆ
ಅಹಿಂಸೆ ಎನ್ನುವುದು ಮನುಷ್ಯ ಜಾತಿಯ ಧರ್ಮವಾಗಿದೆ.
ಹಿಂಸಾ ಪ್ರವೃತ್ತಿ ಮೃಗಗಳಲ್ಲಿ ಪ್ರಬಲವಾಗಿದ್ದು
ಯಾವುದೇ, ನಿಯಮವಿಲ್ಲದ ಕೇವಲ ದೈಹಿಕ
ಬಲವಾಗಿ ಕಾಣಿಸಿಕೊಳ್ಳುತ್ತದೆ.
ಆದರೆ ಮನುಷ್ಯನ ಘನತೆ, ತನಗಿಂತ ಮೇಲಿನ
ನಿಯತಿಯೊಂದಕ್ಕೆ ಅಧೀನವಾಗಿರುವುದರಲ್ಲಿದೆ.

**–ಮಹಾತ್ಮಾ ಗಾಂಧೀ**

ಹಿಂಸಾಮಾರ್ಗಕ್ಕೆ ಹೆಚ್ಚು ಶಿಕ್ಷಣ ಬೇಕಾಗಿದ್ದರೆ, ಅಹಿಂಸಾ ಮಾರ್ಗಕ್ಕೆ ಅದಕ್ಕಿಂತ ಹೆಚ್ಚಿನ ಶಿಕ್ಷಣಬೇಕು. ಯಾಕೆಂದರೆ, ಅದು ಇನ್ನೂ ಕಠಿಣವಾದದ್ದು. ಈ ಶಿಕ್ಷಣದ ಮೊದಲ ಲಕ್ಷಣವೆಂದರೆ, ಭಗವಂತನಲ್ಲಿ ಇರಬೇಕಾದ ಜೀವಂತ ಶ್ರದ್ಧೆ. ಇಂಥ ಶ್ರದ್ಧೆಯುಳ್ಳವನು ದೇವರ ಹೆಸರನ್ನು ಬಾಯಲ್ಲಿ ಉಚ್ಚಾರ ಮಾಡುತ್ತಾ ಹೀನವಾದ ಕೆಲಸಗಳನ್ನು ಮಾಡಲಾರ. ಅವನು ಖಡ್ಗ ಬಲವನ್ನು ನಂಬುವುದಿಲ್ಲ; ದೈವಬಲದಲ್ಲಿ ಅಪಾರವಾದ ನಂಬಿಕೆ ಇಡುತ್ತಾನೆ.

**–ಮಹಾತ್ಮಾ ಗಾಂಧೀ**

ಅಹಿಂಸೆ ಎನ್ನುವುದು ಕ್ಷಮೆಯ ಅತ್ಯುನ್ನತ ಸ್ಥಿತಿ.
ಆದರೆ ಕ್ಷಮಾಗುಣ ಎನ್ನುವುದು ನಿಜವಾಗಿಯೂ
ಧೀರರ ಲಕ್ಷಣ.
ತಾನು ನಿರ್ಭೀತನೂ, ಧೀರನೂ ಆಗದ ಹೊರತು
ಅಹಿಂಸೆಯ ಅನುಷ್ಠಾನ ಸಾಧ್ಯವಿಲ್ಲ

–ಮಹಾತ್ಮಾ ಗಾಂಧೀ

ನನ್ನ ದೃಢವಾದ ನಂಬಿಕೆಯೇನೆಂದರೆ
ಹಿಂಸೆಯ ತಳಹದಿಯ ಮೇಲೆ
ಬಹುಕಾಲ ನಿಲ್ಲಬಲ್ಲ ಏನನ್ನೂ
ನಾವು ಕಟ್ಟಲು ಸಾಧ್ಯವಿಲ್ಲ

–ಮಹಾತ್ಮಾ ಗಾಂಧೀ

ಅಹಿಂಸೆಯನ್ನು ಕುರಿತು ನನಗಿರುವ ನಂಬಿಕೆ
ಅತ್ಯಂತ ಕ್ರಿಯಾಶೀಲವಾದ ಒಂದು ಶಕ್ತಿಯಾಗಿದೆ.
ಹೇಡಿತನಕ್ಕಾಗಲೀ, ದೌರ್ಬಲ್ಯಕ್ಕಾಗಲೀ
ಅಲ್ಲಿ ಆಸ್ಪದವಿಲ್ಲ.
ಹಿಂಸಾರಭಸಮತಿಯಾದವನು ಎಂದಾದರೊಂದು ದಿನ
ಅಹಿಂಸೆಯ ಹಾದಿಗೆ ಬಂದಾನು;
ಆದರೆ ಹೇಡಿಯಾದವನಿಗೆ ಅದೂ ಸಾಧ್ಯವಿಲ್ಲ.

–ಮಹಾತ್ಮಾ ಗಾಂಧೀ

ಇಂದಿನ ಜಗತ್ತು ಬಹಳಷ್ಟನ್ನು ಸಾಧಿಸಿದೆ. ಆದರೆ ಮಾನವೀಯ ಪ್ರೀತಿ – ವಿಶ್ವಾಸಗಳನ್ನು ಕುರಿತು ಬಹುದೊಡ್ಡ ಮಾತನ್ನಾಡುತ್ತಲೇ ಅದು ಮನುಷ್ಯನನ್ನು ನಿಜವಾದ ಮನುಷ್ಯ ನನ್ನಾಗಿ ಮಾಡುವ ಗುಣಗಳಿಗಿಂತ ಮಿಗಿಲಾಗಿ ಹಿಂಸೆ ದ್ವೇಷಗಳನ್ನೆ ತನ್ನ ನೆಲೆಯನ್ನಾಗಿ ಮಾಡಿಕೊಂಡಿದೆ. ಯುದ್ಧ ಎನ್ನುವುದು ಸತ್ಯದ ಹಾಗೂ ಮಾನವೀಯತೆಯ ನಿರಾಕರಣೆಯಾಗಿದೆ. ಹಲವು ವೇಳೆ ಯುದ್ಧ ಅನಿವಾರ್ಯವಾಗಿರಬಹುದು: ಆದರೆ ಅದರ ಪರಿಣಾಮಗಳು ಮಾತ್ರ ಯೋಚಿಸಿದರೆ, ಅತ್ಯಂತ ಭಯಂಕರವಾದವುಗಳು. ಕೇವಲ ಕೊಲ್ಲುವುದಲ್ಲ–ಹುಟ್ಟಿದ ಮನುಷ್ಯ ಎಂದಾದರೊಂದು ದಿನ ಸಾಯಲೇಬೇಕು – ಯುದ್ಧ ದಿಂದಾಗಿ ಉದ್ದೇಶಪೂರ್ವಕ ವಾದ ಮತ್ತು ನಿರಂತರವಾದ ದ್ವೇಷ ಹಾಗೂ ಅಸತ್ಯಗಳು ಪ್ರಚಾರವಾಗುತ್ತ, ಅವೇ ಕ್ರಮೇಣ ಮನುಷ್ಯನ ದೈನಂದಿನ ಜೀವನದ ಒಂದು ಅಭ್ಯಾಸವಾಗಿ ಬಿಡುತ್ತವೆ ಎನ್ನುವುದು ನಿಜಕ್ಕೂ ಭಯಂಕರವಾದ ಸಂಗತಿ ಯಾಗಿದೆ. ಮಾನವಕುಲ ಕೇವಲ ದ್ವೇಷ ಹಾಗೂ ಅಸಹನೆ ಗಳಿಂದ ನಿರ್ದೇಶಿತವಾಗುತ್ತ ಬದುಕುವುದು ಅತ್ಯಂತ ಅಪಾಯ ಕಾರಿ ಮತ್ತು ಆತ್ಮಘಾತಕವಾದದ್ದು. ಯಾಕೆಂದರೆ ಅವು ಸತ್ಯಾನ್ವೇಷಿಯಾದ ಮನಸ್ಸನ್ನು ತಿರುಚಿ ವಿಕೃತಗೊಳಿಸಿ ಬಿಡುತ್ತವೆ.

**–ಜವಾಹರಲಾಲ್ ನೆಹರೂ**

ಜೀವ ಕೊಡುವ ಶಕ್ತಿ ನಿಮಗಿಲ್ಲದ ಮೇಲೆ
ಯಾರನ್ನಾದರೂ ಕೊಲ್ಲುವ ಅಧಿಕಾರ ನಿಮಗೆ ಇದೆಯೆ ?

**–ಬುದ್ಧ**

ಹಿಂಸೆಯೇ ಭಾರತದ ಪಂಥವಾಗುವುದಾದರೆ,
ಅಂಥ ಭಾರತದಲ್ಲಿ ನಾನು ಬದುಕಿ ಉಳಿಯಲು
ನನಗೆ ಆಸಕ್ತಿಯಿಲ್ಲ.
ಅಂಥ ಭಾರತ ನನ್ನಲ್ಲಿ ಯಾವ ಅಭಿಮಾನವನ್ನೂ
ಹುಟ್ಟಿಸಲಾರದು.

**–ಮಹಾತ್ಮಾ ಗಾಂಧೀ**

ಹಿಂಸೆಯನ್ನು ಹಿಂಸೆಯಿಂದಲೆ ಎದುರಿಸುತ್ತೇವೆ –
ಎನ್ನುವುದು
ನಮ್ಮ ನೈತಿಕ ಹಾಗೂ ಬೌದ್ಧಿಕ ದಿವಾಳಿತನವನ್ನು
ನಾವೇ ಒಪ್ಪಿಕೊಂಡಂತೆ.
ಅದರ ಪರಿಣಾಮ, ವಿಷವೃತ್ತವೊಂದನ್ನು
ಪ್ರಾರಂಭಿಸಿದಂತೆ.

**–ಮಹಾತ್ಮಾ ಗಾಂಧೀ**

ನಾವು ನಮ್ಮ ಎದುರಾಳಿಗಳನ್ನು
ಪ್ರೀತಿಯಿಂದ ಮಾತ್ರ ಒಲಿಸಿಕೊಳ್ಳಲು ಸಾಧ್ಯ;
ದ್ವೇಷದಿಂದ ಅಲ್ಲ.
ದ್ವೇಷ ಎಂಬುದು ಹಿಂಸೆಯ ಇನ್ನೊಂದು ಗೂಢರೂಪ.
ನಾವು ನಿಜವಾಗಿಯೂ ಅಹಿಂಸೆಯ ಪ್ರತಿಪಾದಕರಾದರೆ
ನಮ್ಮಲ್ಲಿ ಹಗೆತನದ ಭಾವನೆಯಿರಲು ಸಾಧ್ಯವಿಲ್ಲ.

**–ಮಹಾತ್ಮಾ ಗಾಂಧೀ**

ಸ್ಥಿತ್ಯಂತರಗೊಳ್ಳುತ್ತಿರುವ ಹಾಗೂ ಪರಿವರ್ತನಾಭಿಮುಖ ವಾದ ಈ ಹೊತ್ತಿನ ಕ್ರಾಂತಿಕಾರೀ ಕಾಲಮಾನದಲ್ಲಿ, ಹಳೆಯ ಮೌಲ್ಯಗಳೆಲ್ಲ ಪಲ್ಲಟವಾಗಿ, ನಾವು ಹೊಸ ಮಾನದಂಡಗಳ ಅನ್ವೇಷಣೆಯಲ್ಲಿ ತೊಡಗುತ್ತಿರುವಾಗ, ನಮ್ಮ ಮನಸ್ಸಿನ ಭಾವ ಶುದ್ಧಿ ಮತ್ತು ಉದ್ದೇಶಗಳನ್ನು ಕಾಪಾಡಿಕೊಂಡು, ನಮ್ಮ ಆದರ್ಶ ಹಾಗೂ ಗುರಿಗಳಿಗೆ ಅನುಗುಣವಾದ ದಾರಿ ಮತ್ತು ವಿಧಾನಗಳನ್ನು ನಾವು ದೃಢವಾಗಿ ಅವಲಂಬಿಸಿಕೊಂಡು ನಿಲ್ಲಬೇಕಾಗಿದೆ. ಈ ಉದ್ದೇಶಗಳನ್ನು ನಾವು ಹಿಂಸಾಮಾರ್ಗದಿಂದಲಾಗಲಿ, ಅಧಿಕಾರಬಲದಿಂದಾಗಲೀ, ಸಂದರ್ಭಾನುಸಾರವಾಗಿ ತಾಳುವ ಅವಕಾಶವಾದೀ ನಿಲುವುಗಳಿಂದಾಗಲೀ ಸಾಧಿಸಲಾರೆವು. ಅಹಿಂಸಾ ಮಾರ್ಗವೊಂದಕ್ಕೆ ನಾವು ಬದ್ಧರಾಗಿ, ನೇರವಾದ ಕ್ರಿಯಾಶೀಲತೆಯಿಂದ ಸ್ವತಂತ್ರ ಭಾರತವನ್ನು ಕಟ್ಟಬೇಕಾಗಿದೆ.

**–ಜವಾಹರಲಾಲ್ ನೆಹರೂ**

ಮನುಷ್ಯ ಅನ್ಯಾಯದ ವಿರುದ್ಧ, ಹಿಂಸೆಯಿಂದ ಪ್ರಖ್ಯಾತಿ ಗಳಿಸಿಕೊಳ್ಳುವುದರ ವಿರುದ್ಧ ಗಟ್ಟಿಯಾಗಿ ನಿಂತು ಹೋರಾಡಲು ಸದಾಕಾಲವೂ ಸಿದ್ಧನಾಗಿರಬೇಕಾಗುತ್ತದೆ. ಇಂಥ ಹೋರಾಟಕ್ಕೆ ಅಣಿಯಾಗಿರುವುದೇ ಅವನ ನಿತ್ಯಚಾರವಾಗಬೇಕು. ಸಹಜ ನಡೆ ವಳಿಕೆಯಾಗಬೇಕು.

**–ರಾಮಮನೋಹರ ಲೋಹಿಯಾ**

## — ೧೧ —

ಸಂಕುಚಿತವಾದ ಮನಸ್ಸುಳ್ಳವರಿಗೆ
ತನ್ನವರು ಅನ್ಯರು ಎಂಬ ಭೇದ ಕಾಣಿಸುತ್ತದೆ
ಉದಾರವಾದ ಮನಸ್ಸುಳ್ಳವರಿಗಾದರೋ
ಜಗತ್ತೇ ಒಂದು ಕುಟುಂಬವೆಂದು ತೋರುತ್ತದೆ.

**–ಶಾರ್ಙ್ಗಧರಪದ್ಧತಿ**

ಮರಗಳು ಎಂದೂ ತಮ್ಮಲ್ಲಿನ ಹಣ್ಣುಗಳನ್ನು
ತಾವೇ ತಿನ್ನುವುದಿಲ್ಲ,
ನದಿಯು ತನಗಾಗಿ ಎಂದೂ ನೀರನ್ನು
ತಡೆಗಟ್ಟಿಕೊಳ್ಳುವುದಿಲ್ಲ,
ಸಾಧುಗಳೂ ಹಾಗೆಯೇ.

**–ಕಬೀರ**

ವಿದ್ಯಾವಿನಯ ಸಂಪನ್ನರಾದ ಬ್ರಾಹ್ಮಣರನ್ನು,
ಹಸುವನ್ನು, ಆನೆಯನ್ನು, ನಾಯಿಯನ್ನು,
ಹಾಗೂ ಶ್ವಪಚನನ್ನು, ಜ್ಞಾನಿಗಳಾದವರು
ಸಮದೃಷ್ಟಿಯಿಂದ ಕಾಣುತ್ತಾರೆ.

**–ಭಗವದ್ಗೀತಾ**

ನಾನು ಎಷ್ಟರ ಮಟ್ಟಿಗೆ ಭಾರತವರ್ಷಕ್ಕೆ ಸೇರಿದವನೋ
ಅಷ್ಟರಮಟ್ಟಿಗೆ ಈ ಪ್ರಪಂಚಕ್ಕೂ ಸೇರಿದವನಾಗಿದ್ದೇನೆ.

**–ಸ್ವಾಮಿ ವಿವೇಕಾನಂದ**

'ಎಲ್ಲ ಮನುಷ್ಯರೂ ಜನ್ಮತಃ ಸಮಾನರು ಮತ್ತು ಸ್ವತಂತ್ರರು' ಎನ್ನುವುದು ನಿಜವಾದ ಅರ್ಥದಲ್ಲಿ ನಿಸರ್ಗ ನಿಯಮವೇನಲ್ಲ. ಎಲ್ಲರೂ ಹುಟ್ಟುತ್ತಲೇ ಬುದ್ಧಿ ಮತ್ತೆಯಲ್ಲಿ ಸಮಾನರೇನಲ್ಲ; ಆದರೆ ಇತರರಿಗಿಂತ ಹೆಚ್ಚು ಬುದ್ಧಿವಂತ ರಾದವರು, ಈ ಸಮಾನತೆಯ ತತ್ವವನ್ನು, ತಮಗಿಂತ ಕಡಿಮೆ ಬುದ್ಧಿವಂತರ ಸೇವೆಗೆ ಬಳಸಿದಾಗ, ಈ ತತ್ವಕ್ಕೆ ಒಂದು ಸಮರ್ಥನೆ ದೊರೆತಂತಾಗುತ್ತದೆ.

**–ಮಹಾತ್ಮಾ ಗಾಂಧೀ**

ನನ್ನ ಕಲ್ಪನೆಯ ಆದರ್ಶ ಸಮಾಜಕ್ಕೆ,
ಸ್ವಾತಂತ್ರ್ಯ, ಸಮಾನತೆ, ಸೋದರತ್ವಗಳೇ ತಳಹದಿ.
ಪ್ರಜಾಪ್ರಭುತ್ವ ಎಂದರೆ ಅದು ಸರ್ಕಾರದ ಒಂದು
ಪ್ರಕಾರವಲ್ಲ.
ಆದೊಂದು ಸಹಬಾಳುವೆ, ಸಹಭಾಗಿತ್ವದ ವ್ಯವಸ್ಥೆ.
ಪ್ರಜಾಸತ್ತೆ ಅಸಮಾನತೆಗೆ ವಿರೋಧಿಯಾದದ್ದು
ಅಲ್ಲಿ, ಸ್ಥಾನಮಾನಗಳಲ್ಲಾಗಲೀ, ಉದ್ಯೋಗದಲ್ಲಾಗಲಿ
ಮೇಲು ಕೀಳುಗಳಿಲ್ಲ.

**– ಡಾ. ಬಿ.ಆರ್. ಅಂಬೇಡ್ಕರ್**

ಪ್ರಜಾಪ್ರಭುತ್ವ ಎನ್ನುವುದು ಸಹಬಾಳ್ವೆಯ ಒಂದು ವಿಧಾನ.
ಪ್ರಜಾಪ್ರಭುತ್ವದ ಬೇರುಗಳನ್ನು ನಾವು ಹುಡುಕಬೇಕಾದದ್ದು
ಸಾಮಾಜಿಕ ಸಂಬಂಧಗಳಲ್ಲಿ;
ಯಾವ ಜನರಿಂದ ಒಂದು ಸಮಾಜ ರೂಪುಗೊಂಡಿದೆಯೋ
ಆ ಜನಗಳಿಗೂ ಸಮಾಜಕ್ಕೂ ಇರುವ ಹೊಂದಾಣಿಕೆಯಲ್ಲಿ.

**–ಡಾ. ಬಿ.ಆರ್. ಅಂಬೇಡ್ಕರ್**

ನಮಗೆ ಇಂದು ಬೇಕಾದದ್ದು,
ಕಬ್ಬಿಣದ ಮಾಂಸಖಂಡಗಳು, ಉಕ್ಕಿನ ನರಗಳು.
ನಾವು ಸಾಕಷ್ಟು ಕಾಲ ಕಣ್ಣೀರು ಸುರಿಸಿದ್ದಾಯಿತು;
ಗೋಳಾಡಿದ್ದಾಯಿತು; ಇನ್ನು ಅಳುವುದು ಸಾಕು.
ನಮಗೆ ಈ ಹೊತ್ತು ಬೇಕಾಗಿರುವುದು,
ಪುರುಷಸಿಂಹರನ್ನು ನಿರ್ಮಾಣ ಮಾಡಬಲ್ಲ ಧರ್ಮ;
ನಮಗಿಂದು ಬೇಕಾಗಿರುವುದು ಪುರುಷಸಿಂಹರನ್ನು
ರೂಪಿಸಬಲ್ಲ ಸಿದ್ಧಾಂತಗಳು;
ನಮಗಿಂದು ಬೇಕಾಗಿರುವುದು
ಪುರುಷಸಿಂಹರನ್ನು ಸಿದ್ಧಗೊಳಿಸಬಲ್ಲ ಶಿಕ್ಷಣ ಕ್ರಮ.
ಯಾವುದು ನಿಮ್ಮನ್ನು ದೈಹಿಕವಾಗಿ, ಬೌದ್ಧಿಕವಾಗಿ,
ಆಧ್ಯಾತ್ಮಿಕವಾಗಿ ದುರ್ಬಲರನ್ನಾಗಿ ಮಾಡುವುದೋ
ಅಂಥದೆಲ್ಲವನ್ನೂ ವಿಷದಂತೆ ಭಾವಿಸಿ, ತಿರಸ್ಕರಿಸಿ.

**–ಸ್ವಾಮಿ ವಿವೇಕಾನಂದ**

ನನ್ನ ಮಟ್ಟಿಗಂತೂ ಧರ್ಮವಿಲ್ಲದೆ ರಾಜಕೀಯವಿಲ್ಲ,
ಆದರೆ ಒಂದು ಮಾತು: ಧರ್ಮವೆಂದರೆ
ಮೂಢನಂಬಿಕೆಗಳ ಧರ್ಮ ಅಲ್ಲ.
ದ್ವೇಷ ಹಾಗೂ ಘರ್ಷಣೆಗಳಿಗೆ ಅವಕಾಶ ಮಾಡಿಕೊಡುವ
ಮತಾಂಧತೆ ಅಲ್ಲ.
ಅದು ಸರ್ವ ಸಹಿಷ್ಣುತೆಯ ಸಾರ್ವತ್ರಿಕ ಧರ್ಮ.
ನಿಜವಾದ ನೈತಿಕ ಧರ್ಮವಿಲ್ಲದ ರಾಜಕೀಯವನ್ನು
ದೂರ ಇರಿಸಬೇಕು.

**–ಮಹಾತ್ಮಾ ಗಾಂಧೀ**

"... ದೇವರ ಮಕ್ಕಳು ನೀವು; ಅಮೃತಪುತ್ರರು ನೀವು.
ನಿತ್ಯ ಮುಕ್ತರು ನೀವು; ಪರಮ ಪವಿತ್ರರು ನೀವು.
ಮಾನವನನ್ನು ಪಾಪಿ ಎಂದು ಕರೆಯುವುದು ಮಹಾಪಾಪ.

**–ಸ್ವಾಮಿ ವಿವೇಕಾನಂದ**

ಜಾಗತಿಕ ವ್ಯವಹಾರಗಳಲ್ಲಿ ನಮ್ಮ ಮೊಟ್ಟಮೊದಲ ಗುರಿ ಶಾಂತಿಸ್ಥಾಪನೆ, ಜನಾಂಗಿಕ ಸಮಾನತೆ ಹಾಗೂ ಇನ್ನೂ ಪರಾಧೀನತೆಗೊಳಗಾದ ಎಲ್ಲರ ಬಿಡುಗಡೆ.

ಇನ್ನುಳಿದಂತೆ, ಜಗತ್ತಿನ ವ್ಯವಹಾರದಲ್ಲಿ ನಮಗೆ ಆಸಕ್ತಿಯಿಲ್ಲ ಮತ್ತು ನಮ್ಮ ಆಂತರಿಕ ವ್ಯವಹಾರಗಳಲ್ಲಿ ಬೇರೆಯವರು ಪ್ರವೇಶಿಸುವುದನ್ನೂ ನಾವು ಇಷ್ಟಪಡುವುದಿಲ್ಲ. ಒಂದು ವೇಳೆ ಇತರರು ರಾಜಕೀಯವಾಗಿಯೋ, ಸೈನಿಕವಾಗಿಯೋ, ಆರ್ಥಿಕವಾಗಿಯೋ ನಮ್ಮ ವ್ಯವಹಾರಗಳಲ್ಲಿ ಕೈಹಾಕುವುದಾದರೆ, ನಾವು ಅದನ್ನು ಪ್ರತಿಭಟಿಸುತ್ತೇವೆ.

**–ಜವಾಹರಲಾಲ್ ನೆಹರೂ**

ಈ ಹೊತ್ತಿನ ತುರ್ತಾದ ಅಗತ್ಯ ಯಾವುದೆಂದರೆ:
ನಮ್ಮ ದೇಶದ ಜನಸಮುದಾಯದಲ್ಲಿ
ತಾವೆಲ್ಲ ಒಂದು ರಾಷ್ಟ್ರಕ್ಕೆ ಸೇರಿದವರು ಎಂಬ
ಭಾವನೆಯನ್ನು ಎಚ್ಚರಗೊಳಿಸುವುದು.
ತಾವು ಮೊಟ್ಟ ಮೊದಲು ಭಾರತೀಯರು
ಅನಂತರ ಹಿಂದೂ, ಮುಸ್ಲಿಂ ಗುಜರಾತಿ, ಕನ್ನಡಿಗ
ಎಂಬ ನಿಲುವು ಗಟ್ಟಿಗೊಳ್ಳಬೇಕಾಗಿದೆ.

**–ಡಾ. ಬಿ.ಆರ್. ಅಂಬೇಡ್ಕರ್**

ಹಿಂದೂ ಮತ್ತು ಮುಸಲ್ಮಾನ-ಇಬ್ಬರೂ ಭಾರತ ಮಾತೆಯ ಮಕ್ಕಳು. ನಮ್ಮನ್ನು ಹೆತ್ತತಾಯಿ ನಮ್ಮ ಗೌರವ ಹಾಗೂ ಆರಾಧನೆಗೆ ಅರ್ಹಳು. ಅಂಥ ಪೂಜೆ ನಮ್ಮ ಆತ್ಮವನ್ನು ಪರಿಶುದ್ಧಗೊಳಿಸುತ್ತದೆ. ಹೀಗಿರುವಾಗ, ಶಾಶ್ವತವಾದ, ಮತ್ತು ಯಾರ ತೊಡೆಯ ಮೇಲೆ ನಾವು ಹುಟ್ಟಿ ಸಾಯುತ್ತೇವೆಯೋ, ಅಂಥ ಮಾತೃಭೂಮಿ ನಮ್ಮೆಲ್ಲರ ನಿಷ್ಠೆ ಹಾಗೂ ಗೌರವಗಳಿಗೆ ಎಷ್ಟೊಂದು ಅರ್ಹಳು ಎನ್ನುವುದನ್ನು ಹೇಳಿ ಮುಗಿಸಬಹುದೆ ? ಇಲ್ಲಿ ಹುಟ್ಟಿ ಬೆಳೆದ ಯಾರೇ ಆದರೂ-ಹಿಂದುವಾಗಲೀ, ಮುಸ್ಲಿಮನಾಗಲಿ, ಕ್ರೈಸ್ತನಾಗಲಿ, ಪಾರಸಿಯಾಗಲಿ, ಜೈನನಾಗಲಿ, ಸಿಖ್‌ನಾಗಲಿ-ಎಲ್ಲರೂ ಸಮಾನವಾಗಿ ಭರತಮಾತೆಯ ಮಕ್ಕಳೇ. ಆದಕಾರಣ ಅವರೆಲ್ಲರೂ, ರಕ್ತಸಂಬಂಧಕ್ಕಿಂತಲೂ ಮಿಗಿಲಾದ ಭ್ರಾತೃತ್ವದ ಬಂಧನದಲ್ಲಿ ಒಂದಾದವರೇ.

**-ಮಹಾತ್ಮಾ ಗಾಂಧೀ**

ಬೇರೆಬೇರೆಯ ಧರ್ಮಕ್ಕೆ ಸೇರಿದವರು ಇಲ್ಲಿ ವಾಸಿಸುತ್ತಿದ್ದಾರೆ ಎಂಬ ಕಾರಣಕ್ಕೆ ಭಾರತವು ಏಕರಾಷ್ಟ್ರವಾಗಲು ಸಾಧ್ಯವಿಲ್ಲ ಎಂದು ಹೇಳಲು ಬರುವುದಿಲ್ಲ. ವಿದೇಶೀಯರು ಈ ದೇಶಕ್ಕೆ ಪ್ರವೇಶಿಸಿದ ಮಾತ್ರಕ್ಕೆ ಅದು ರಾಷ್ಟ್ರವನ್ನೇನೂ ನಾಶ ಮಾಡುವುದಿಲ್ಲ; ಅದರ ಬದಲು ಅವರೂ ಈ ದೇಶದೊಂದಿಗೆ ಬೆರೆತು ಹೋಗುತ್ತಾರೆ. ಯಾವುದೇ ಒಂದು ದೇಶ 'ಏಕರಾಷ್ಟ್ರ'ವಾಗಿ ಉಳಿಯುವುದು, ಆ ಬಗೆಯ ಪರಿಸ್ಥಿತಿ ಉಂಟಾದಾಗ; ಅಂದರೆ ಒಂದು ದೇಶಕ್ಕೆ ಎಲ್ಲವನ್ನೂ ತನ್ನೊಳಗೆ ಅರಗಿಸಿಕೊಳ್ಳುವ ಸಾಮರ್ಥ್ಯವಿದ್ದಾಗ ಮಾತ್ರ. ಭಾರತವು ಯಾವಾಗಲೂ ಈ ಬಗೆಯ ಸಾಮರ್ಥ್ಯವನ್ನು ಹೊಂದಿದೆ. ವಾಸ್ತವವಾಗಿ ನೋಡಿದರೆ ಎಷ್ಟು ರೀತಿಯ ವ್ಯಕ್ತಿಗಳಿದ್ದಾರೋ, ಅಷ್ಟೂ ಬಗೆಯ ಧರ್ಮಗಳಿವೆ.

ಯಾರು ಈ ರಾಷ್ಟ್ರದ ನಿಜವಾದ ಅಂತಃಸ್ಸತ್ವವನ್ನು, ಅರಿತಿದ್ದಾರೋ ಅವರು ಇತರರ ಧರ್ಮಗಳಲ್ಲಿ ತಲೆ ಹಾಕುವು ದಿಲ್ಲ. ಅನ್ಯರ ಧರ್ಮಗಳಲ್ಲಿ ಹಾಗೆ ತಲೆಹಾಕುವವರು ನಿಜವಾದ ರಾಷ್ಟ್ರೀಯರೆಂದು ಕರೆಯಿಸಿಕೊಳ್ಳಲು ಅರ್ಹರಲ್ಲ. ಭಾರತದಲ್ಲಿ ಕೇವಲ ಹಿಂದೂಗಳೇ ಇರಬೇಕೆಂದು ಹಿಂದೂಗಳು ವಾದಿಸತೊ ಡಗಿದರೆ, ಇವರೊಂದಿಗೆ ಜತೆಯಾಗಿ, ಭಾರತವನ್ನು ತಮ್ಮ ಮನೆ ಯನ್ನಾಗಿ ಮಾಡಿಕೊಂಡಿರುವ ಮಹಮ್ಮದೀಯರೂ ಪಾರಸಿ ಗಳೂ, ಮತ್ತು ಕ್ರೈಸ್ತರೂ ತಾವೆಲ್ಲ, ತಮ್ಮ ಸ್ವಂತ ಹಿತಾಸಕ್ತಿಗಳಿ ಗಾಗಿ ಮಾತ್ರ ಒಟ್ಟಿಗೆ ಬದುಕುವ ದಾರಿಯನ್ನು ಹಿಡಿಯಬೇಕಾ ಗುತ್ತದೆ. ಜಗತ್ತಿನ ಯಾವುದೇ ಭಾಗದಲ್ಲಿಯೂ, ಒಂದು ರಾಷ್ಟ್ರ ಮತ್ತು ಒಂದು ಧರ್ಮ ಈ ಎರಡೂ ಸಮಾನಾರ್ಥಕಗಳಾಗಿಲ್ಲ ಭಾರತದ ಮಟ್ಟಿಗಂತೂ ಇದು ಇನ್ನೂ ನಿಜ.

**–ಮಹಾತ್ಮ ಗಾಂಧೀ**

ನಾನು ಭಾರತದ ಏಕತೆಯನ್ನು ಕುರಿತು ಹೆಚ್ಚು ಒತ್ತಿ ಹೇಳಲು ಅಪೇಕ್ಷಿಸುತ್ತೇನೆ. ಈ ಏಕತೆ ಕೇವಲ ರಾಜಕೀಯ ಏಕತೆ ಅಲ್ಲ. ಅದಕ್ಕಿಂತ ಆಳವಾದ ಸ್ತರದೊಳಗಿನ ಭಾವನಾತ್ಮಕ ಏಕತೆ; ಹೃದಯ ಹಾಗೂ ಮನಸ್ಸುಗಳನ್ನು ಒಂದುಗೂಡಿಸುವ ಏಕತೆ: ಮತ್ತು ನಮ್ಮನ್ನು ಒಡೆದು ಪ್ರತ್ಯೇಕಿಸುವ ಪ್ರವೃತ್ತಿಗಳನ್ನು ದಮನಗೊಳಿಸಿ ಬೆಸೆಯುವ ಏಕತೆ. ಭಾರತದ ಈ ಏಕತೆಯನ್ನು ಕುರಿತು ಎಲ್ಲರೂ ಒಪ್ಪುವಾಗ, ಕೆಲವು ಜನ, ಹಾಗೂ ಕೆಲವು ಪಕ್ಷಗಳು ಕೂಡಾ, ಈ ಏಕತೆಗೆ ಭಂಗ ತರುವಂತೆ ನಡೆದುಕೊಳ್ಳುತ್ತಾರಲ್ಲ, ಯಾಕೆ ?

ನನ್ನ ಮಟ್ಟಿಗೆ ಹೇಳುವುದಾದರೆ, ಭಾರತದ ಉತ್ತರಕ್ಕೂ ದಕ್ಷಿಣಕ್ಕೂ, ಪೂರ್ವಕ್ಕೂ ಪಶ್ಚಿಮಕ್ಕೂ ನಡುವೆ ಯಾವುದೇ ಬಿರುಕುಗಳಿಲ್ಲ. ಇರುವುದು ಒಂದೇ ಭಾರತ, ಅದಕ್ಕೆ ನಾವೂ ನೀವೂ ಹಕ್ಕುದಾರರು; ಅದು ನಮ್ಮೆಲ್ಲರಿಗೂ ಸೇರಿದ್ದು.

ಉತ್ತರದಿಂದ ದಕ್ಷಿಣದವರೆಗೂ ಚಾಚಿಕೊಂಡಿರುವ ಈ ಭಾರತ, ಪ್ರತಿಯೊಬ್ಬ ಭಾರತೀಯನ ಅಮೂಲ್ಯವಾದ ಆಸ್ತಿ. ಸಾವಿರ ಸಾವಿರ ವರ್ಷಗಳಿಂದಲೂ ಇದು ನಮಗೆ ಸಮಾನವಾದ ಸಂಪತ್ತು. ಭಾರತದ ಹಲವು ಸಂಸ್ಕೃತಿಗಳು–ಅದು ಉತ್ತರದ್ದಾದರೂ ಆಗಿರಲಿ, ದಕ್ಷಿಣದ್ದಾದರೂ ಆಗಿರಲಿ, ಅದಕ್ಕೆ ನಾವೆಲ್ಲ ಸಮಾನವಾಗಿ ಹಕ್ಕುದಾರರು. ಇದಕ್ಕೂ ಮಿಗಿಲಾಗಿ ನಮ್ಮೆದುರಿಗಿರುವ ಈ ದೇಶದ ಉಜ್ವಲವಾದ ಭವಿಷ್ಯವೂ ನಮ್ಮದೇ.

**–ಜವಾಹರಲಾಲ್ ನೆಹರೂ**

ಮೊದಲು ನಾವು ಈ ದೇಶದ ಶಿಸ್ತಿನ ಸೇವಕರಾಗದೆ ಇದ್ದರೆ
–ಒಳ್ಳೆಯ ಶಾಸಕರಾಗಲಾರೆವು, ಒಳ್ಳೆಯ
ವಿದ್ಯಾರ್ಥಿಗಳಾಗಲಾರೆವು, ಮತ್ತೇನೂ ಆಗಲಾರೆವು.

ಮೊದಲು ನಾವು ಗಳಿಸಿಕೊಳ್ಳಬೇಕಾದ ಅರ್ಹತೆಯೇನೆಂದರೆ:
ನಾವು ಮೊದಲು ಸಮಸ್ತ ಮನುಕುಲದ ಕಲ್ಯಾಣಕ್ಕೆ
ಅನಂತರ ಭಾರತದ ಕಲ್ಯಾಣಕ್ಕೆ ಶ್ರಮಿಸುವ ಸೇವಕರು
ಎನ್ನುವ ಭಾವನೆಯನ್ನು ಬೆಳೆಯಿಸಿಕೊಳ್ಳುವುದು.
ಇದೇ ನಮ್ಮ ಆದರ್ಶವಾಗಬೇಕು.

**–ಡಾ.ಎಸ್. ರಾಧಾಕೃಷ್ಣನ್**

ಈ ದೇಶದಲ್ಲಿ ಏನೇನೋ ನೆಪಮಾಡಿಕೊಂಡು ತಲೆ ಎತ್ತುವ ವಿಚ್ಛಿದ್ರಕಾರಕ ಪ್ರವೃತ್ತಿಗಳಿಗೆ ಎದುರಾಗಿ ನಾವು ಸದಾ ಎಚ್ಚರದಲ್ಲಿ ನಿಲ್ಲಬೇಕಾಗಿದೆ. ಈ ವಿಚ್ಛಿದ್ರಕಾರಕ ಶಕ್ತಿಗಳಲ್ಲಿ ಕೋಮುವಾದವೂ ಒಂದು. ಒಂದು ಧರ್ಮಕ್ಕೆ ಸೇರಿದವರನ್ನು ಮತ್ತೊಂದು ಧರ್ಮಕ್ಕೆ ಸೇರಿದವರ ಮೇಲೆ ಎತ್ತಿ ಕಟ್ಟಿ ದ್ವೇಷ ವನ್ನು ಪ್ರಚೋದಿಸುವ ಈ ಪ್ರವೃತ್ತಿ ವಾಸ್ತವವಾಗಿ ಯಾವುದಾದ ರೊಂದು ಧರ್ಮದ ಮುಸುಕನ್ನು ಹೊದ್ದ ರಾಜಕೀಯವೇ. ಹಾಗಾದಾಗ ಪ್ರಾಂತ್ಯಾಭಿಮಾನಕ್ಕಾಗಲೀ, ದೇಶಾಭಿಮಾನ ಕ್ಕಾಗಲೀ ಯಾವ ಅರ್ಥವೂ ಇರುವುದಿಲ್ಲ; ಆಗ ಇರುವುದು ಕೇವಲ ಜಾತ್ಯಭಿಮಾನವೊಂದೇ. ಈ ಜಾತೀಯತೆ ಎನ್ನುವುದು ನಮ್ಮ ದೇಶದಲ್ಲಿ ಬಹುಶಃ ಉಳಿದೆಲ್ಲವುಗಳಿಗಿಂತ ಅತ್ಯಂತ ವಿಶ್ವಾಸಘಾತಕವೂ ಅಪಾಯಕಾರಿಯೂ ಆದ ಪ್ರವೃತ್ತಿಯಾಗಿದೆ. ಜಾತಿಪದ್ಧತಿಯು ಮೊದಲು ರೂಪುಗೊಂಡಾಗ, ನಿಜವಾ ಗಿಯೂ ಒಳ್ಳೆಯದೇ ಆಗಿದ್ದಿರಬಹುದು. ಆದರೆ ಕಳೆದ ಕೆಲವು ಶತಮಾನಗಳ ಕಾಲದಲ್ಲಿ ಅದು ನಮ್ಮನ್ನು ರಾಷ್ಟ್ರೀಯವಾಗಿ ಹಾಗೂ ಸಾಮಾಜಿಕವಾಗಿ ದುರ್ಬಲಗೊಳಿಸಿದೆ. ಅದು ನಮ್ಮನ್ನು ಚಿಕ್ಕ ಚಿಕ್ಕ ಗುಂಪುಗಳನ್ನಾಗಿ ಒಡೆದಿದೆ. ಜನರನ್ನು ಉಚ್ಚ ಜಾತಿ, ಮಧ್ಯಮಜಾತಿ, ಕೆಳಜಾತಿ ಹಾಗೂ ವಿಜಾತೀಯರೆಂಬ ಶ್ರೇಣೀಕರಣಕ್ಕೆ ಒಳಗುಪಡಿಸಿ, ಪ್ರತ್ಯೇಕತೆಗಳನ್ನು ಏರ್ಪಡಿಸಿದೆ. ಹೀಗಾಗಿ ಅಸಮಾನತೆಯನ್ನು ಅದು ನಿರಂತರವಾಗಿ ಉಳಿಸಿ, ಒಂದು ವರ್ಗ ಮತ್ತೊಂದು ವರ್ಗವನ್ನು ಶೋಷಿಸಲು ಅವಕಾಶ ಮಾಡಿಕೊಟ್ಟಿದೆ. ಈ ಕಾರಣದಿಂದ ನಮ್ಮನಮ್ಮಲ್ಲಿಯೇ ಒಗ್ಗಟ್ಟಿ ಲ್ಲದ ನಾವು, ನಮ್ಮಲ್ಲಿ ಸಾಕಷ್ಟು ಒಳ್ಳೆಯ ಗುಣಗಳೂ, ಸಾಮರ್ಥ್ಯವೂ ಇದ್ದರೂ, ಇತರ ರಾಷ್ಟ್ರಗಳೊಂದಿಗಿನ ಸ್ಪರ್ಧೆ ಯಲ್ಲಿ ಹಿಂದೆ ಬಿದ್ದಿದ್ದೇವೆ. ಭಾರತೀಯ ಜನಸಮುದಾಯ ವೆಲ್ಲವೂ ಜಾತಿಮತ ಪಂಥಗಳಾಗಿ ಒಡೆದು, ಒಬ್ಬರ

ಜತೆಗೊಬ್ಬರು ನಡೆಯುದಂತಾಗಿದ್ದಾರೆ. ಆದಕಾರಣ ಈ ವಿಭಜಕ ಪ್ರವೃತ್ತಿಗಳನ್ನು ಎದುರಿಸಿ ನಿಲ್ಲಲು ಅಗತ್ಯವಾದ ರಾಷ್ಟ್ರೀಯ ಏಕತೆಯನ್ನು ನಾನು ಮತ್ತೆ ಮತ್ತೆ ಪ್ರತಿಪಾದಿಸುತ್ತೇನೆ.

**–ಜವಾಹರಲಾಲ್ ನೆಹರೂ**

ನಿಮ್ಮ ಎದುರಿಗೆ ಉದಾತ್ತವಾದ ಆದರ್ಶಗಳನ್ನು
ಇರಿಸಿಕೊಳ್ಳಿರಿ;
ಯಾವ ಕಾರಣಕ್ಕೂ ಕ್ಷುದ್ರತೆಗಳೊಂದಿಗೆ
ಸಂಧಾನಮಾಡಿಕೊಂಡು
ಅವುಗಳ ಬೆಲೆಯನ್ನು ತಗ್ಗಿಸಬೇಡಿರಿ.
ನೋಡಿ, ಕಣ್ಣು ತೆರೆದು ನೋಡಿ, ಹೊಲಗದ್ದೆಗಳಲ್ಲಿ
ಹಾಗೂ ಕಾರ್ಖಾನೆಗಳಲ್ಲಿ ಬೆವರು ಸುರಿಸಿ ದುಡಿಯುವ
ಲಕ್ಷಾಂತರ ಮಂದಿಯನ್ನು,
ಹಾಗೆಯೇ ನಮ್ಮ ನಾಡಗಡಿಗಳಾಚೆಗೆ
ನಮ್ಮ–ನಿಮ್ಮಂತೆಯೇ ಸಮಸ್ಯೆಗಳನ್ನೆದುರಿಸುವ
ಅಸಂಖ್ಯಾತರನ್ನು.
ನಿಜವಾದ ರಾಷ್ಟ್ರಭಕ್ತರಾಗಿರಿ; ಹಾಗೆಯೇ ಅಂತರ್
ರಾಷ್ಟ್ರೀಯರಾಗಿರಿ.
ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬೇಕಾದರೆ,
ಮನುಷ್ಯ ತಾನು ಎಂದೂ ಕೇವಲ ಸಾಯುವುದಕ್ಕಾಗಿ
ಮಾತ್ರ
ಹುಟ್ಟಿದವನಲ್ಲವೆಂಬಂತೆ ಬದುಕಬೇಕು.

**–ಜವಾಹರಲಾಲ್ ನೆಹರೂ**

ಹಿಂದೂಧರ್ಮದಲ್ಲಿ ರೂಢಿಯಲ್ಲಿರುವ ಅಸ್ಪೃಶ್ಯತೆಯು, ನನ್ನ ಅಭಿಪ್ರಾಯದಲ್ಲಿ ದೇವರ ಹಾಗೂ ಮನುಷ್ಯರ ವಿಚಾರದಲ್ಲಿ ಮಾಡುವ ಮಹಾಪಾಪ. ಅದು ನಿಧಾನ ವಿಷದಂತೆ ಹಿಂದೂ ಧರ್ಮದ ಶರೀರದೊಳಗೆ ವ್ಯಾಪಿಸುತ್ತಿದೆ. ಅಸ್ಪೃಶ್ಯತೆಗೆ, ಹಾಗೆ ನೋಡಿದರೆ ಯಾವ ನಿಜವಾದ ಶಾಸ್ತ್ರಗಳ ಸಮ್ಮತಿಯೂ ಇಲ್ಲ. ಅದು ಅಸ್ಪೃಶ್ಯರಂತೆಯೇ, ಇತರರನ್ನೂ – ಅಧೋಗತಿಗೆ ತಳ್ಳಿದೆ. ಅದು ಕೋಟ್ಯಂತರ ಮನುಷ್ಯರ ಬೆಳವಣಿಗೆಯನ್ನು ಕುಂಠಿತಗೊಳಿಸಿದೆ. ಅವರಿಗೆ ಸಲ್ಲಬೇಕಾದ ಕನಿಷ್ಠ ಸೌಲಭ್ಯಗಳಿಂದ ಅವರನ್ನು ವಂಚಿಸಿದೆ. ಆದಕಾರಣ ಎಷ್ಟು ಬೇಗ ಅಸ್ಪೃಶ್ಯತೆ ನಿವಾರಣೆಯಾಗುವುದೋ, ಅಷ್ಟು ಈ ಹಿಂದೂಧರ್ಮಕ್ಕೆ, ಭಾರತಕ್ಕೆ ಹಾಗೂ ಮಾನವ ಜನಾಂಗಕ್ಕೆ ಒಳ್ಳೆಯದು.

**–ಮಹಾತ್ಮಾ ಗಾಂಧೀ**

ನನಗೆ ನನ್ನದೆ ಆದ ತಾಯ್ನಾಡಿದೆಯೆ ?
ಇಲ್ಲ, ಇಲ್ಲ.
ಹಂದಿನಾಯಿಗಳಿಗಿಂತಲೂ ಕಡೆಯಾಗಿ ಬದುಕುತ್ತಿರುವ
ಕುಡಿಯಲು ಒಂದು ತೊಟ್ಟು ನೀರಿಗೂ ದೂರವಿರುವ
ನನ್ನ ಜನಕ್ಕೆ ಇದು ತಾಯ್ನಾಡೆ ?
ದೇವಾಲಯಗಳ ಪ್ರವೇಶವನ್ನು ನಿರಾಕರಿಸುವ
ಅಸಮಾನತೆಯೆ ಮೂಲಭೂತ ತತ್ವವಾಗಿರುವ
ಈ ಧರ್ಮ ನನ್ನ ಧರ್ಮವೆ ?
ಆತ್ಮಗೌರವ ಉಳ್ಳ ಯಾವ ಅಸ್ಪೃಶ್ಯನೂ
ಈ ನಾಡಿನ ಬಗ್ಗೆ ಹೆಮ್ಮೆಪಟ್ಟುಕೊಳ್ಳುವುದು ಸಾಧ್ಯವಿಲ್ಲ.

**–ಡಾ. ಬಿ.ಆರ್. ಅಂಬೇಡ್ಕರ್**

ಅಸ್ಪೃಶ್ಯತೆ ಎನ್ನುವುದು ಅಸ್ಪೃಶ್ಯರನ್ನೂ, ಹಿಂದೂಗಳನ್ನೂ ಅಷ್ಟೆ ಏಕೆ ಇಡೀ ರಾಷ್ಟ್ರವನ್ನೂ ನಾಶ ಮಾಡಿದೆ. ದಲಿತ ವರ್ಗದವರು ಆತ್ಮಗೌರವ ಹಾಗೂ ಸ್ವಾತಂತ್ರ್ಯವನ್ನು ಪಡೆದು ಕೊಂಡರೆ, ಅದರಿಂದ ಅವರ ಪ್ರಗತಿ ಮತ್ತು ಅಭ್ಯುದಯಗಳಿಗೆ ಮಾತ್ರವಲ್ಲ, ರಾಷ್ಟ್ರದ ಶಕ್ತಿ ಹಾಗೂ ಸಮೃದ್ಧಿಗೆ,– ಉತ್ತಮವಾದ ಕೊಡುಗೆಯನ್ನು ಅವರು ಸಲ್ಲಿಸಬಲ್ಲರು.

**–ಡಾ. ಬಿ.ಆರ್. ಅಂಬೇಡ್ಕರ್**

ನಾನು ದೇವರನ್ನು ನಂಬುತ್ತೇನೆ.
ಹಾಗೆಯೆ ಮನುಷ್ಯನ ಶಕ್ತಿಯನ್ನೂ ನಂಬುತ್ತೇನೆ.
ಕಷ್ಟದಲ್ಲಿ ಇರುವವರಿಗೆ ನೆರವಾಗಬೇಕೆಂಬುದರಲ್ಲೂ
ನನಗೆ ನಂಬಿಕೆ ಇದೆ.
ಇತರರನ್ನು ಕಷ್ಟದಿಂದ ಪಾರು ಮಾಡಲು
ನಾನು ನರಕಕ್ಕಾದರೂ ಹೋಗಲು ಸಿದ್ಧನಿದ್ದೇನೆ.

**–ಸ್ವಾಮಿ ವಿವೇಕಾನಂದ**

ಭರತಖಂಡದ ಪುರೋಭಿವೃದ್ಧಿಗೆ ಮಾರಕವಾದ ಎರಡು
ಆತಂಕಗಳಿವೆ: ಒಂದು ಪೂರ್ವಾಚಾರ ಪರಾಯಣತೆ,
ಮತ್ತೊಂದು ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆ

**–ಸ್ವಾಮಿ ವಿವೇಕಾನಂದ**

ನಿಜವಾದ ದೇಶಭಕ್ತಿ ಕೇವಲ ಭಾವುಕತೆ ಅಲ್ಲ. ಅಥವಾ ತಾಯ್ನಾಡಿನ ಮೇಲಿನ ಅಭಿಮಾನವೂ ಅಲ್ಲ. ದೇಶಭಕ್ತಿ ಎಂದರೆ, ತನ್ನ ದೇಶಬಾಂಧವರ ಸೇವೆ ಮಾಡಬೇಕು, ಎನ್ನುವ ಉತ್ಸಾಹ.

**–ಸ್ವಾಮಿ ವಿವೇಕಾನಂದ**

ಭಾರತದ ಇಂದಿನ ದುರ್ಗತಿಗೆ ದಾರಿದ್ರ್ಯವೇ ಕಾರಣ.
ಜನಸಾಮಾನ್ಯರಿಗೆ ಶಿಕ್ಷಣ ನೀಡಿ,
ನಷ್ಟವಾದ ಅವರ ವ್ಯಕ್ತಿತ್ವವನ್ನು
ಅವರಿಗೆ ಮರಳಿದೊರಕಿಸಿ ಕೊಡುವುದೇ
ಈ ಹೊತ್ತಿನ ನಮ್ಮ ಪ್ರಥಮ ಕರ್ತವ್ಯವಾಗಬೇಕು.

**–ಸ್ವಾಮಿ ವಿವೇಕಾನಂದ**

ನಮ್ಮಲ್ಲಿ ಪರಸ್ಪರ ಹೊಂದಾಣಿಕೆಯಿಲ್ಲದೆ ವಿಭಜನೆಗೊಂಡ ಕಾರಣದಿಂದ ನಾವು ಒಬ್ಬರ ಜತೆಗೊಬ್ಬರು ಹೊಡೆದಾಡು ತ್ತಿದ್ದೇವೆ. ನಮ್ಮ ಸ್ವಭಾವದಲ್ಲಿ ಯಾವುದೇ ಶಿಸ್ತಿಲ್ಲದ ಕಾರಣ ದಿಂದ ನಾವೆಲ್ಲ ಒಂದುಗೂಡಿಲ್ಲ. ಜಗತ್ತಿನ ಎಲ್ಲ ಗೊಂದಲ ಗಳೂ ನಮ್ಮನ್ನು ಕವಿದುಕೊಂಡಿವೆ. ಜಗತ್ತಿನಲ್ಲಿದೆ ಎಂದು ಭಾವಿಸಲಾದ ಗೊಂದಲವೇನಿದ್ದರೂ, ನಮ್ಮೊಳಗಿನ ಗೊಂದಲದ ಪ್ರತೀಕವಾಗಿದೆ. ಈ ಪರಿಸ್ಥಿತಿಯಲ್ಲಿ ನಮ್ಮನ್ನು, ಒಟ್ಟಿಗೆ ಹಿಡಿದು ಬೆಸೆದು ಕೂಡಿಸುವ ಸತ್ವವೊಂದನ್ನು ಕಂಡುಕೊಳ್ಳಬಲ್ಲೆವಾದರೆ, ನಮ್ಮನ್ನು ಸಂಕುಚಿತಗೊಳಿಸುವಂಥ, ಕಟ್ಟಿ ಹಾಕುವಂಥ ಯಾವುದೂ ಇಲ್ಲವೆಂಬ ಅರಿವಾಗುತ್ತದೆ. ಹಾಗೂ ಅದು ನಮ್ಮ ನಾಳಿನ ಜಗತ್ತನ್ನು ರೂಪಿಸುತ್ತದೆ.

**–ಡಾ. ಎಸ್. ರಾಧಾಕೃಷ್ಣನ್**

ಎಲ್ಲ ಜನಾಂಗಗಳನ್ನೂ ಒಂದುಗೂಡಿಸಬಲ್ಲ ಮೂಲಸೂತ್ರವೊಂದರ ಅನ್ವೇಷಣೆಯಲ್ಲಿ ನಾವು ತೊಡಗಿದ್ದೇವೆ. ಕೇವಲ ರಾಜಕೀಯವಾದ ಅಥವಾ ವಾಣಿಜ್ಯ ಮೂಲವಾದ ವ್ಯವಹಾರಗಳಿಂದ ಯಾವ ಒಂದು ರಾಷ್ಟ್ರವೂ, ಮತ್ತೊಂದು ರಾಷ್ಟ್ರದೊಂದಿಗೆ ನಿಜವಾದ ಏಕತೆಯನ್ನು ಸಾಧಿಸಲಾರದು. ನಿಜವಾದ ವಿಚಾರವಂತರೂ ಹಾಗೂ ಶಕ್ತರು ಮಾತ್ರವೇ ಎಲ್ಲವನ್ನೂ ಒಂದುಗೂಡಿಸುವ ಆ ಆಧ್ಯಾತ್ಮಿಕ ಏಕತೆಯನ್ನು ಕಂಡುಕೊಳ್ಳಬಲ್ಲರು, ಮತ್ತು ಅದನ್ನು ಬೋಧಿಸಬಲ್ಲರು.

**–ರವೀಂದ್ರನಾಥ ಠಾಕೂರ್**

ಈ ಜಗತ್ತು ಅವ್ಯವಸ್ಥಿತವೂ, ಚಂಚಲವೂ ಆಗಿದೆ ಎಂದರೆ, ಅದು ನಮ್ಮ ಸದ್ಯದ ಮನಃಸ್ಥಿತಿಯನ್ನೆ ಪ್ರತಿಬಿಂಬಿಸುತ್ತಿದೆ – ಎಂದು ಅರ್ಥ. ನಾವೆಂಥ ಜನ ಎಂದರೆ, ನಮಗೆ ಪ್ರತಿಭಟಿಸಲೂ ಬಾರದು. ಕೇವಲ ಸೋತು ಹಿಂಜರಿಯುವುದಷ್ಟೆ ಗೊತ್ತು. ಪ್ರತಿಯೊಂದು ಕಾಲಮಾನವೂ ಈ ಬಗೆಯ ಸಂಶಯ ಹಾಗೂ ಅನಿಶ್ಚಯತೆಯ ಮೂಲಕ ಹಾದು ಬಂದಿದೆ. ಬೇರೆ ಬೇರೆ ಜನಾಂಗಗಳು ಇದಕ್ಕಿಂತಲೂ ದಟ್ಟವಾದ ಕತ್ತಲೆಗಳನ್ನು ಕಂಡಿರಬಹುದು. ಆದರೆ ನಾವು ಅತ್ಯಂತ ದಿಗ್‌ಭ್ರಮೆಗೊಳಿಸುವ ಪರಿಸ್ಥಿತಿಗಳ ನಡುವೆ ಬದುಕುತ್ತಿದ್ದೇವೆ. ಮತ್ತು ನೈತಿಕವಾಗಿ ನೆಲೆಯಿಲ್ಲದವರಾಗಿದ್ದೇವೆ. ವೈದ್ಯಕೀಯ, ಯಂತ್ರವಿಜ್ಞಾನ, ಕೈಗಾರಿಕೆ, ಕೃಷಿ, ಯುದ್ಧಕಲೆ ಇತ್ಯಾದಿಗಳಲ್ಲಿ, ಆಗಿರುವ ಪ್ರಗತಿಯ ಪರಿಣಾಮ ಕಣ್ಣಿಗೆ ಹೊಡೆಯುವಷ್ಟಾಗಿದೆ. ಮತ್ತು ವಿಜ್ಞಾನದ ಈ ಸಾಹಸಗಳು ನಮ್ಮ ಸುಖವನ್ನು ಹೆಚ್ಚಿಸುತ್ತವೆ ಎಂದು ನಂಬಿಕೊಂಡಂತೆ ಕಾಣುತ್ತದೆ. ಆದರೆ ಅವೆಲ್ಲಾ ಎಚ್ಚರಿಕೆಯ

ಗಂಟೆಯನ್ನು ಬಾರಿಸಿವೆ; ನಾವೀಗ ಒಂದು ಅಸಂಗತ ಸಂದಿಗ್ಧ, ವಿರೋಧಾಭಾಸ ಹಾಗೂ ಅನಿಶ್ಚಯತೆಯ ಕಾಲದಲ್ಲಿ ಬದುಕುತಿದ್ದೇನೆ.

ಇದಕ್ಕೆಲ್ಲಾ ಮುಖ್ಯ ಕಾರಣ, ನಾವು ನಿಂತ ನೆಲದಲ್ಲಿ ಬೇರೂರಲಾರದವರಾಗಿದ್ದೇವೆ ಎನ್ನುವುದೇ ಆಗಿದೆ. ನಮ್ಮ ಮನಸ್ಸಿನಲ್ಲಿ ಸಮಾಧಾನ ಸಮತೋಲನಗಳಿಗೆ ಕಾರಣವಾದ ಆಧ್ಯಾತ್ಮಿಕ ತಳಹದಿಯಿಂದ ನಾವು ದೂರ ಸಿಡಿದು ನಿಂತಿದ್ದೇವೆ. ನಮ್ಮಲ್ಲಿ ಅನೇಕರು ಚರಿತ್ರೆಯಿಂದ ನಮ್ಮ ಬೇರುಗಳನ್ನು ಕಳಚಿಕೊಂಡವರಾಗಿ, ನಮ್ಮ ಗತಕಾಲದಿಂದ ಗಡೀಪಾರಾಗಿದ್ದೇವೆ. ಈ ಹೊತ್ತಿನಲ್ಲಿ ನಾವು ನಮ್ಮ ಮನಸ್ಸಿನ ಸ್ವಭಾವವನ್ನು ಪುನರ್ನವೀಕರಣಗೊಳಿಸಿಕೊಳ್ಳಬೇಕಾಗಿದೆ. ಭಯುತಲ್ಲಣಗಳಿಂದ, ಹತಾಶೆ, ಅಸಹಾಯಕತೆಗಳಿಂದ ನಮ್ಮನ್ನು ಪಾರು ಮಾಡಿ ಮೇಲೆತ್ತಿ ಹೊಸಜಗತ್ತಿನಲ್ಲಿ ನಿಲ್ಲಿಸುವ ಸೃಜನಾತ್ಮಕ ಪರಿವರ್ತನೆಗೆ ಕಾದಿದ್ದೇವೆ. ಅಂಥ ಹೊಸ ಜಗತ್ತನ್ನು ಕಟ್ಟಬೇಕಾದರೆ ಹೊಸ ಮನುಷ್ಯರೇ ಬೇಕು.

**–ಡಾ. ಎಸ್. ರಾಧಾಕೃಷ್ಣನ್**

ಜಾತಿಪದ್ಧತಿಯ ವಿನಾಶದಲ್ಲಿ ಆಸಕ್ತಿಯಿರುವ
ಸಮಾಜದ ಕೆಳವರ್ಗದವರನ್ನು, ನೀವು
ಸುಶಿಕ್ಷಿತರನ್ನಾಗಿ ಮಾಡಿದರೆ,
ಖಂಡಿತವಾಗಿಯೂ ಜಾತಿಪದ್ಧತಿ ಚೂರುಚೂರಾಗಿ
ಹೋಗುತ್ತದೆ.

**–ಡಾ. ಬಿ.ಆರ್. ಅಂಬೇಡ್ಕರ್**

ಭಾರತವು ಜಾತ್ಯತೀತ ಅಥವಾ ಧರ್ಮನಿರಪೇಕ್ಷ ರಾಷ್ಟ್ರವೆಂದು ಸಂವಿಧಾನದಲ್ಲಿ ಹೇಳಲಾಗಿದೆ. ಹಾಗೆಂದರೆ ಒಂದು ಜನಾಂಗವಾಗಿ ನಾವು, ಅಗೋಚರವಾದ ಶಕ್ತಿಯೊಂದರ ಅಸ್ತಿತ್ವವನ್ನಾಗಲಿ, ಧರ್ಮಕ್ಕೆ ಜೀವನದೊಂದಿಗೆ ಇರುವ ಪ್ರಸ್ತುತತೆಯುನ್ನಾಗಲಿ ನಿರಾಕರಿಸುತ್ತೇವೆ ಎಂದೂ, ಧಾರ್ಮಿಕೇತರವಾದುದನ್ನು ವೈಭವಿಸುತ್ತೇವೇ ಎಂದೂ ಅರ್ಥವಲ್ಲ. ಅಥವಾ ಜಾತ್ಯತೀತತೆಯೆ ಒಂದು ಇತ್ಯಾತ್ಮಕವಾದ ಧರ್ಮದಂತೆ ವರ್ತಿಸುತ್ತದೆ ಎಂದೂ ಅಥವಾ ರಾಷ್ಟ್ರವೇ ದೈವದ ಪರಮಾಧಿಕಾರವನ್ನು ವಹಿಸಿಕೊಳ್ಳುತ್ತದೆ ಎಂದೂ ಅರ್ಥವಲ್ಲ. ಪರಮ ಚೈತನ್ಯವೊಂದರಲ್ಲಿ ಶ್ರದ್ಧೆಯನ್ನು ಇಡುವುದೆ ಭಾರತೀಯ ಮನೋಧರ್ಮದ ಮೂಲತತ್ವವಾಗಿರುವುದರಿಂದ, ರಾಷ್ಟ್ರವು ಯಾವುದೇ ಒಂದು ನಿರ್ದಿಷ್ಟ ಧರ್ಮದೊಂದಿಗೆ ಸಮೀಕರಣಗೊಳ್ಳುವ ಅಥವಾ ನಿರ್ದಿಷ್ಟ ಧರ್ಮದಿಂದ ನಿಯಂತ್ರಿತವಾಗುವ ಸಂಭವವೇ ಇಲ್ಲ. ಈ ಬಗೆಯಿಂದ ಧಾರ್ಮಿಕ ನಿಷ್ಪಕ್ಷಪಾತ ನಿಲುವು ನಮ್ಮ ರಾಷ್ಟ್ರ ಜೀವನವನ್ನು ರೂಪಿಸುವುದರಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಈ ದೇಶದ ನಾಗರಿಕರ ಯಾವುದೇ ಒಂದು ವರ್ಗ, ಇತರರಿಗೆ ನಿರಾಕೃತವಾದ ಹಕ್ಕುಗಳು ತನಗೆ ಇವೆ ಎಂದು ವಿಜೃಂಭಿಸುವಂತಿಲ್ಲ; ಯಾವುದೇ ಒಂದು ಧರ್ಮಕ್ಕೆ ಸೇರಿದವನೆಂಬ ಕಾರಣದಿಂದ ಈ ದೇಶದ ಯಾವೊಬ್ಬ ಪ್ರಜೆಯೂ, ಯಾವುದೇ ಅಸಾಮರ್ಥ್ಯದಿಂದ ಅಥವಾ ಭೇದಭಾವಗಳಿಂದ ನರಳಬೇಕಾಗಿಲ್ಲ. ಎಲ್ಲರೂ ಎಲ್ಲರಿಗೂ ಸಮಾನವಾದ ರಾಷ್ಟ್ರಜೀವನದೊಂದಿಗೆ ಪೂರ್ಣಪ್ರಮಾಣ ಪೂರ್ಣಪ್ರಮಾಣದಲ್ಲಿ ಪಾಲುದಾರರು. ಇದು ಧರ್ಮನಿರಪೇಕ್ಷ ಎಂಬ ಮಾತಿನ ಅರ್ಥ.

**–ಡಾ. ಎಸ್. ರಾಧಾಕೃಷ್ಣನ್**

ತೀರಾ ವಿಕೃತಗೊಳಿಸಿದ ಚರಿತ್ರೆಯ ಪಠ್ಯಪುಸ್ತಕಗಳನ್ನು ಎಲ್ಲಿಯವರೆಗೆ ಶಾಲೆಗಳಲ್ಲಿ ಬೋಧಿಸಲಾಗುತ್ತದೆಯೋ, ಅಲ್ಲಿಯವರೆಗೆ ನಮ್ಮ ದೇಶದಲ್ಲಿ ಕೋಮು ಸಾಮರಸ್ಯವನ್ನು ನೆಲೆಗೊಳಿಸಲು ಸಾಧ್ಯವಿಲ್ಲ.

**-ಮಹಾತ್ಮಾ ಗಾಂಧೀ**

ಸಂವಿಧಾನವೊಂದು ತುಂಬ ಚೆನ್ನಾಗಿರಬಹುದು
ಆದರೆ ಅದನ್ನು ಕಾರ್ಯರೂಪಕ್ಕೆ ಇಳಿಸುವ ಜನರು
ಕೆಟ್ಟವರಾಗಿದ್ದ ಪಕ್ಷದಲ್ಲಿ
ಸಂವಿಧಾನವೂ ಕೆಟ್ಟದ್ದೇ ಆಗುವುದು.
ಅದಕ್ಕೆ ಪ್ರತಿಯಾಗಿ, ಒಂದು ಕೆಟ್ಟಸಂವಿಧಾನವೂ
ಒಳ್ಳೆಯವರ ಕೈಯ್ಯಲ್ಲಿ ಜನಹಿತಕಾರಿಯೆ ಆಗಬಹುದು.

**-ಡಾ. ಬಿ.ಆರ್. ಅಂಬೇಡ್ಕರ್**

ಭಾರತೀಯ ಸಂಸ್ಕೃತಿ ಬರಿಯ ವೈದಿಕವಲ್ಲ; ಅವೈದಿಕವೂ ಆದರ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ.... ನನ್ನದು ವಿಶ್ವಸಂಸ್ಕೃತಿ. ಅಭಾರತೀಯವೂ ಅದರಲ್ಲಿ ಸೇರಿದೆ. ಸನಾತನವೂ (ಪುರಾತನ ಅಲ್ಲ) ಶಾಶ್ವತವೂ ಆಧ್ಯಾತ್ಮಿಕವೂ, ವಿಚಾರ ಮತ್ತು ವಿಜ್ಞಾನಗಳಿಗೆ ಅವಿರುದ್ಧವೂ ಆಗಿರುವ ಸತ್ಯ ಎಲ್ಲಿಯೇ ಇರಲಿ ಅದನ್ನು ನಾನು ಸ್ವೀಕರಿಸಿದ್ದೇನೆ.

**-ಕುವೆಂಪು**

ಪ್ರಜಾತಂತ್ರದ ಜೀವಾಳ ಯಾವುದು ಎಂದು ಯೋಚಿಸುವಾಗ ಅದು ಭಿನ್ನಮತ, ಅನ್ಯಮತ, ಅಭಿಪ್ರಾಯ ಭೇದಗಳನ್ನು ಸಹಿಸುವುದು ಮಾತ್ರವಲ್ಲ, ಗೌರವಿಸಲೂ ಸಮರ್ಥವಾದ ಒಂದು ವಿಶಿಷ್ಟ ಮನಃಸಂಸ್ಕಾರ ಎಂದು ಹೇಳಬೇಕಾಗುತ್ತದೆ.

**–ಎಂ. ಗೋಪಾಲಕೃಷ್ಣ ಅಡಿಗ**

ಪ್ರತಿಯೊಂದು ಮಗುವೂ ನಿಸರ್ಗ ಸಹಜವಾದ
ಧರ್ಮದಿಂದ ಹುಟ್ಟುತ್ತದೆ.
ಆದರೆ ಅದರ ತಂದೆ–ತಾಯಂದಿರು, ಅದನ್ನು
ಯಹೂದಿಯನ್ನಾಗಿಯೋ, ಕ್ರೈಸ್ತನನ್ನಾಗಿಯೋ ಅಥವಾ
ಬಹುದೇವತಾರಾಧಕನನ್ನಾಗಿಯೋ ಮಾಡುತ್ತಾರೆ.

**–ಹ. ಅಬೂಹುರೈರ (ರ) ಮುಸ್ಲಿಮ್**

ಹುಟ್ಟುವಾಗ 'ವಿಶ್ವಮಾನವ'ನಾಗಿಯೆ ಹುಟ್ಟಿದ ಮಗುವನ್ನು ನಾವು ದೇಶ, ಭಾಷೆ, ಮತ, ಜಾತಿ, ಜನಾಂಗ, ವರ್ಣ ಇತ್ಯಾದಿ ಉಪಾಧಿಗಳಿಂದ ಬದ್ಧನನ್ನಾಗಿ ಮಾಡುತ್ತೇವೆ.

**–ಕುವೆಂಪು**

ಉದಾರವಾದಿಗಳು ಮಾತ್ರ ಈ ದೇಶವನ್ನು
ಒಗ್ಗೂಡಿಸಬಲ್ಲರು.
ಭಾರತ ಅತ್ಯಂತ ಪ್ರಾಚೀನವಾದ ಹಾಗೂ
ವಿಶಾಲವಾದ ದೇಶ.
ಸ್ವಯಂಪ್ರೇರಿತ ಮನುಷ್ಯನ ಸಂಕಲ್ಪದ ಹೊರತು
ಬೇರೆಯಾವ ಶಕ್ತಿಯೂ ಈ ದೇಶವನ್ನು ಒಗ್ಗೂಡಿಸಲಾರದು

**–ರಾಮಮನೋಹರ ಲೋಹಿಯಾ**

ವ್ಯಕ್ತಿ ಕಂಡ ಕನಸು ಒಳ್ಳೆಯದಾದರೆ,
ಜನತೆ ಅದನ್ನು ಒಪ್ಪಿಕೊಂಡು
ತನ್ನದನ್ನಾಗಿ ಮಾಡಿಕೊಳ್ಳುತ್ತದೆ.
ಉನ್ನತ ಪ್ರವೃತ್ತಿಯ ವ್ಯಕ್ತಿ ಕಾಣುವ ಕನಸು
ಆ ಪ್ರವೃತ್ತಿಗೆ ತಕ್ಕಂತೆ ಅತ್ಯುನ್ನತಿಗೆ ತಕ್ಕಂತೆ
ಉನ್ನತವಾಗಿರುತ್ತದೆ.
ಉನ್ನತಿಯಿಂದ ಜನರ ಉನ್ನತಿ ಹೆಚ್ಚುತ್ತದೆ.
ಹೀಗೆ, ಸಮುನ್ನತವಾದ ವ್ಯಕ್ತಿತ್ವವನ್ನು ಪಡೆದ
ಜನಾಂಗ, ಜೊತೆಯ ಜನಾಂಗಗಳಿಗಿಂತ
ಹೆಚ್ಚಿನದೊಂದು ಕನಸನ್ನು ಮಾನವ ಕುಲದ
ಕನಸಾಗಿ ರೂಪಿಸಿ ನಿಲ್ಲಿಸುತ್ತದೆ.

**–ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಸ್ವರ್ಗ ಎಂಬುದಿದೆಯೋ, ನರಕ ಎಂಬುದಿದೆಯೋ ಅದನ್ನು
ಕಟ್ಟಿಕೊಂಡು ನಮಗೆ ಆಗಬೇಕಾದುದೇನು ?
ಶಾಶ್ವತವಾದ ಒಂದು ವಸ್ತು ಇದೆಯೋ ಇಲ್ಲವೋ
ಅದರ ಚರ್ಚೆಯಿಂದ ಪ್ರಯೋಜನವೇನು ?
ನಮ್ಮ ಕಣ್ಣೆದುರಿಗೆ ಒಂದು ಪ್ರಪಂಚವಿದೆ,
ಅದು ಅತ್ಯಂತ ದುಃಖಮಯವಾಗಿದೆ.
ಬುದ್ಧನಂತೆ, ಅದರಲ್ಲಿ ಪ್ರವೇಶಿಸಿ,
ಅದರ ದುಃಖವನ್ನು ಕಡಿಮೆ ಮಾಡಲು ಪ್ರಯತ್ನಪಡಿ.
ಇಲ್ಲವಾದರೆ ಅಂಥ ಪ್ರಯತ್ನದಲ್ಲಿ ನಿಮ್ಮ ಪ್ರಾಣವನ್ನೇ ಬಿಡಿ.

**–ಸ್ವಾಮಿ ವಿವೇಕಾನಂದ**

ಯಾರು ನಿಜವಾದ ಪ್ರೇಮದಿಂದ ಪ್ರಾಪ್ತವಾಗುವ ನೈತಿಕ ಶಕ್ತಿಯನ್ನೂ, ಮತ್ತು ಆಧ್ಯಾತ್ಮಿಕವಾಗಿ ಎಲ್ಲರನ್ನೂ ಸಮಾನರೆಂದು ಕಾಣುವ ದರ್ಶನವನ್ನೂ ಒಂದು ವರವೆಂಬಂತೆ ಪಡೆದುಕೊಂಡಿದ್ದಾರೆಯೋ,
ಯಾರು ಅನ್ಯರ ಬಗೆಗೆ ಕಿಂಚಿತ್ತಾದರೂ ದ್ವೇಷಭಾವನೆಯನ್ನು ಬೆಳೆಯಿಸಿಕೊಂಡಿಲ್ಲವೋ,
ಮತ್ತು ತಮ್ಮನ್ನು ಅನ್ಯರ ಸ್ಥಾನದಲ್ಲಿ ಸಹಾನುಭೂತಿಯ ಮೂಲಕ ನಿಲ್ಲಿಸಿಕೊಳ್ಳಬಲ್ಲ ಅಂತರ್ ದೃಷ್ಟಿಯನ್ನು ಪಡೆದುಕೊಂಡಿದ್ದಾರೊ ಅಂಥವರು ಮಾತ್ರವೇ, ನಮ್ಮ ಮುಂದಿರುವ ಕಾಲಮಾನದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಳ್ಳಲು ಅರ್ಹರಾಗಿದ್ದಾರೆ.

**–ರವೀಂದ್ರನಾಥ ಠಾಕೂರ್**

ಈ ದೇಶ ಒಂದು, ಈ ಜನವೆಲ್ಲಾ ಒಂದು ಎನ್ನುವ ಭಾವನೆಯೆ ನಮ್ಮನ್ನೆಲ್ಲ ಒಂದುಗೂಡಿಸಿರುವ ಮೂಲಸೂತ್ರ ವಾಗಿದೆ. ಈ ಸಮಾನವಾದ ಪ್ರೇರಣೆ, ಈ ಸಮಾನವಾದ ವಿಚಾರ, ಈ ಹೊತ್ತು ಹುಟ್ಟಿದ್ದಲ್ಲ; ಶತಶತಮಾನಗಳಿಂದ ಬಂದದ್ದು. 'ಆಸೇತು ಹಿಮಾಚಲ ಪರ್ಯಂತ' ಎಂಬ ಮಾತನ್ನು ನಮ್ಮ ಪ್ರಾಚೀನ ಗ್ರಂಥಗಳೂ ಹೇಳಿವೆ.

ನಾವು ಈ ದೇಶದ ವಿವಿಧ ಪ್ರಾಂತ್ಯಗಳಿಗೆ ಸೇರಿದವರಾಗಿರ ಬಹುದು. ವಿವಿಧ ಭಾಷೆಗಳನ್ನಾಡುವವರಾಗಿರಬಹುದು. ಆದರೆ ನಮ್ಮನ್ನು ಹಿಡಿದು ಕೂಡಿಸಿರುವ ಸುವರ್ಣಸೂತ್ರ ಒಂದೇ.

ಸಹಸ್ರಾರು ವರ್ಷಗಳಿಂದ ಈ ನೆಲ ನಮ್ಮದು,
ಹೃದಯದಲ್ಲಿ, ಮನಸ್ಸಿನಲ್ಲಿ, ಆಧ್ಯಾತ್ಮಿಕ ಪರಂಪರೆಯಲ್ಲಿ
ಇದು ನಮ್ಮದು.

ಶತಶತಮಾನಗಳಿಂದ ಈ ನಾಡಿನ ಭೂಗೋಳ
ನಮ್ಮನ್ನು ಒಂದುಗೂಡಿಸಿದೆ,
ಈ ನಾಡಿನ ಚರಿತ್ರೆ ನಮ್ಮನ್ನು ಒಂದುಗೂಡಿಸಿದೆ,
ಈ ನಾಡಿನ ಸಮಾನವಾದ ಸಂಸ್ಕೃತಿ ಒಂದುಗೂಡಿಸಿದೆ,
ಸಮಾನವಾದ ತುಡಿತಗಳು, ಭರವಸೆಗಳು, ಭಯಗಳು
ನಮ್ಮನ್ನು ಒಂದುಗೂಡಿಸಿವೆ.
ನಾವು ಗೆದ್ದ ಗೆಲುವುಗಳು, ನಾವು ಬಿದ್ದ ಸೋಲುಗಳು
ನಮ್ಮನ್ನು ಒಂದುಗೂಡಿಸಿವೆ.
ಇದು ಹಿಂದಿನ ಮಾತಾಯಿತು. ಆದರೆ ಇಂದು ?

ಇಂದು ನಾವೆಲ್ಲ ಸಮಾನವಾದ ಶ್ರಮದಿಂದ
ಸಮಾನವಾದ ತ್ಯಾಗದಿಂದ, ಸಮಾನವಾದ
ಹೋರಾಟಗಳಿಂದ
ಸ್ವಾತಂತ್ರ್ಯವನ್ನು ಗಳಿಸಿದ್ದೇವೆ.

ಈಗ ಕಡೆಯ ಘಕ್ಷ ರಾಜಕೀಯವಾಗಿ ಒಂದಾಗಿರುವ
ನಾವು, ಒಂದು ಸ್ವಂತತ್ರ ಜನಾಂಗವಾಗಿರುವ ನಾವು,
ಶತಶತಮಾನಗಳಿಂದ ಉಳಿಸಿಕೊಂಡಿರುವ ಅಖಂಡತೆಯನ್ನು
ನಾಶವಾಗಲು ಅವಕಾಶ ಕೊಡೋಣವೆ ?
ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯಕ್ಕೆ ಧಕ್ಕೆ ತರೋಣವೆ ?
ನಮ್ಮ ಗತ ಇತಿಹಾಸ ಹಾಗೂ ವರ್ತಮಾನಗಳು
ನಮಗೊಂದು ಸಮಾನತೆಯನ್ನು ಕಲ್ಪಿಸಿರುವಾಗ

ನಮ್ಮ ನಾಳಿನ ಭವಿಷ್ಯ ಈ ದೇಶದ ಲಕ್ಷಾಂತರ ಜನಕ್ಕೆ
ಸುಖ ಸಂತೋಷಗಳನ್ನು ತರಬೇಡವೆ ?

ನಾವು ಈ ದೇಶದಲ್ಲಿ ಎಲ್ಲಿಯೇ ಇರಲಿ,
ಈ ಉದ್ದೇಶಕ್ಕೆ ಹಾಗೂ ದೇಶದ ಸಮಗ್ರತೆಗಾಗಿ
ದೃಢವಾಗಿ ನಿಲ್ಲೋಣ.

**–ಜವಾಹರಲಾಲ್ ನೆಹರೂ**

ಒಂದು ರಾಷ್ಟ್ರದ ಮುನ್ನಡೆಗೆ ಕೊನೆ ಎಂಬುದಿಲ್ಲ. ಜನ ಬರಬಹುದು ಹೋಗಬಹುದು; ತಲೆಮಾರುಗಳೇ ಬದಲಾಗಬಹುದು. ಆದರೂ ಒಂದು ರಾಷ್ಟ್ರದ ಜೀವನ ಎಂಬುದು ನಿರಂತರವಾದುದು. ನಾವು ತಿಳಿದುಕೊಳ್ಳಬೇಕು, ರಾಷ್ಟ್ರವೊಂದರಲ್ಲಿ ಆಂತರಿಕವಾದ ಶಾಂತಿಯಿಲ್ಲದೆ ಇದ್ದರೆ ನಾವು ಏನನ್ನೂ ಸಾಧಿಸಲಾರೆವು–ಯಾವುದೇ ನೀತಿಯನ್ನು ನಾವು ಅನುಸರಿಸಿದರೂ. ಆದರೆ ಕೆಲವು ದಾರಿತಪ್ಪಿದ ಜನರಿದ್ದಾರೆ, ಹಿಂಸೆಯಲ್ಲಿ ತೊಡಗಿ ಅವ್ಯವಸ್ಥೆಯನ್ನುಂಟು ಮಾಡುವಂಥವರು. ನನಗೆ ಆಶ್ಚರ್ಯವಾಗುತ್ತದೆ. ತಲೆಯೊಳಗೆ ಒಂದು ಚೂರು ಬುದ್ಧಿಯಿದ್ದ ಯಾರೂ ಇಂಥ ರಾಷ್ಟ್ರವಿರೋಧೀ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲಾರರು. ನಿದರ್ಶನಕ್ಕೆ ಹೇಳುವುದಾದರೆ ಬಾಂಬುಗಳನ್ನು ಆಸ್ಫೋಟಿಸುವುದು. ಅದರಿಂದ ಯಾವ ಒಳ್ಳೆಯದೂ ಆಗದು. ಅದರ ಬದಲು ಅಂಥ ಕೃತ್ಯಗಳು ನಮ್ಮ ಆರ್ಥಿಕ ವ್ಯವಸ್ಥೆಯನ್ನು ಬುಡಮೇಲು ಮಾಡುತ್ತವೆ. ಅದು ಆತಂಕದ ವಿಚಾರ. ನಮ್ಮ ನಮ್ಮ ರಾಜಕೀಯ ಒಲವುಗಳು ಏನೇ ಇರಲಿ. ಎಲ್ಲದಕ್ಕಿಂತ ಮುಖ್ಯವಾದದ್ದು ಆಂತರಿಕ ಶಾಂತಿ.

ಇರುವ ಕಾನೂನುಗಳನ್ನು ಬದಲಾಯಿಸಲು ಜನಗಳಿಗೆ ಹಕ್ಕಿದೆ; ಬೇಕಾದರೆ ಸರ್ಕಾರಗಳನ್ನೂ ಅವರು ಬದಲಾಯಿ

ಬಹುದು. ಆದರೆ ಆ ಬದಲಾವಣೆಯ ವಿಧಾನ ಪ್ರಜಾಪ್ರಭುತ್ವದ ತತ್ವಗಳಿಗೆ ಅನುಗುಣವಾಗಿರಬೇಕು ಅಷ್ಟೆ. ಆದರೆ ಯಾರು ಹಿಂಸೆಯ ದಾರಿಯನ್ನು ಆಯ್ದುಕೊಳ್ಳುತ್ತಾರೆಯೋ ಅವರಿಗೆ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇಲ್ಲವೆಂದೇ ಅರ್ಥ. ಅವರ ದಾರಿಯೇ ಸರಿ ಅನ್ನುವುದಾದರೆ, ದೇಶದಲ್ಲಿ ಬರಿಯ ಅರಾಜಕತೆ ಉಂಟಾದೀತು ಮತ್ತು ಜನಜೀವನ ಮೊದಲಿದ್ದುದಕ್ಕಿಂತ ಶೋಚನೀಯವಾದ ಸ್ಥಿತಿಗೆ ಇಳಿದೀತು. ಮುಂದಿನ ಎಲ್ಲ ಪ್ರಗತಿಯೂ ಸ್ಥಗಿತವಾಗಿ, ನಾಳಿನ ಜನ ಹೊರಲಾರದ ಹೊರೆಯನ್ನು ಹೊರಬೇಕಾದೀತು.

**–ಜವಾಹರಲಾಲ್ ನೆಹರೂ**

ಒಂದಿಷ್ಟು ಕಿವಿಗೊಟ್ಟು ಕೇಳುವುದಾದರೆ, ನಿಮ್ಮ ಜತೆ ನಮ್ಮ ಈ ಸುಂದರವಾದ ಜಗತ್ತನ್ನು ಕುರಿತು ಮಾತನಾಡಲು ಅಪೇಕ್ಷಿಸುತ್ತೇನೆ. ಹೂವುಗಳನ್ನು ಕುರಿತು, ಹಕ್ಕಿಗಳನ್ನು ಕುರಿತು, ಮರಗಳನ್ನೂ ಪ್ರಾಣಿಗಳನ್ನೂ, ನಕ್ಷತ್ರಗಳನ್ನೂ, ಪರ್ವತಗಳನ್ನೂ ಮತ್ತು ನೀರ್ಗಲ್ಲ ನೆಲೆಗಳನ್ನೂ, ಹೀಗೇ ಈ ಜಗತ್ತಿನ ಅನೇಕ ಅದ್ಭುತಗಳನ್ನು ಕುರಿತು ಮಾತನಾಡಲು ಅಪೇಕ್ಷಿಸುತ್ತೇನೆ. ಇಷ್ಟೊಂದು ಸೌಂದರ್ಯವಿದೆ ನಮ್ಮ ಸುತ್ತಲೂ; ಆದರೆ ಬೆಳೆದ ನೀವು ಅದನ್ನೆಲ್ಲ ಮರೆತು, ಕಛೇರಿಯ ಕಡತಗಳಲ್ಲಿ, ಏನೋ ಮಹಾದೊಡ್ಡ ಕೆಲಸದಲ್ಲಿ ತೊಡಗಿಕೊಂಡವರಂತೆ ಈ ಎಲ್ಲದ ರಿಂದ ಕಳೆದುಹೋಗಿಬಿಡುತ್ತೀರಿ.

ನೀವು ಸ್ವಲ್ಪ ಸಂವೇದನಾಶೀಲರಾಗಿ, ಕಣ್ಣು ತೆರೆದು ನಮ್ಮ ಸುತ್ತ ಇರುವ ಸೌಂದರ್ಯವನ್ನು ನೋಡುತ್ತೀರಿ ಎಂದು ಆಶಿಸುತ್ತೇನೆ: ನಮ್ಮ ಸುತ್ತ ಅರಳುವ ಹೂವುಗಳನ್ನು ಹೆಸರು ಹೇಳಿ ಗುರುತಿಸಬಲ್ಲಿರಾ ? ಅಥವಾ ಹಾಡುವ ಹಕ್ಕಿಗಳನ್ನು

ಗುರುತಿಸಬಲ್ಲಿರಾ ? ಈ ನಿಸರ್ಗದೊಂದಿಗೆ ಕೆಳೆಬೆಳೆಸುವುದು ಎಷ್ಟೊಂದು ಸುಲಭ ! ಆದರೆ ಅದಕ್ಕೆ ಬೇಕಾದದ್ದು ಒಂದಷ್ಟು ಸ್ನೇಹ–ವಿಶ್ವಾಸ. ಎಳೆಯುಂದಿನಲ್ಲಿ ನೀವು ಕಿನ್ನರ ಕತೆಗಳನ್ನು ಓದಿರಬಹುದು. ಆದರೆ ಈ ಸಮಸ್ತ ಲೋಕವೇ ಅಂಥದೊಂದು ಅತ್ಯಂತ ದೊಡ್ಡ ಕಿನ್ನರ ಸಾಹಸ ಕಥೆ. ಆದರೆ ಅದನ್ನು ಕಾಣಲು ನಮಗೆ ಕಣ್ಣುಗಳಿರಬೇಕು. ಅದನ್ನು ಕೇಳಲು ಕಿವಿಗಳಿರಬೇಕು ಮತ್ತು ಈ ಜಗತ್ತಿನ ಜೀವನ ಹಾಗೂ ಸೌಂದರ್ಯವನ್ನು ಆಸ್ವಾದಿಸಲು ತಕ್ಕ ಒಂದು ಮನಸ್ಸಿರಬೇಕು.

**–ಜವಾಹರಲಾಲ್ ನೆಹರೂ**

ಅನೇಕ ವರ್ಷಗಳ ಹಿಂದೆ ನಾವು ವಿಧಿಸಂಕಲ್ಪಿತ ಘಟನೆಯೊಂದರೊಂದಿಗೆ ಸಮಾಗಮವನ್ನು ಗೊತ್ತುಪಡಿಸಿಕೊಂಡಿದ್ದೆವು. ಈಗ ಆ ಘಳಿಗೆ ಬಂದಿದೆ. ಈ ಘಳಿಗೆಯಲ್ಲಿ ನಾವು ನಮ್ಮ ವಾಗ್ದಾನವನ್ನು – ಸಮಗ್ರವಾಗಿ ಅಥವಾ ಪೂರ್ಣ ಪ್ರಮಾಣದಲ್ಲಿ ಅಲ್ಲವಾದರೂ, ಗಣನೀಯವಾಗಿ, ನೆರವೇರಿಸೋಣ. ನಟ್ಟನಡು ರಾತ್ರಿಯ ಘಂಟೆ ಬಡಿಯುವಾಗ, ಇಡೀ ಜಗತ್ತು ನಿದ್ರೆಯಲ್ಲಿ ಮುಳುಗಿರುವಾಗ, ಭಾರತವು ಜೀವಂತಿಕೆಗೆ ಹಾಗೂ ಸ್ವಾತಂತ್ರ್ಯಕ್ಕೆ ಎಚ್ಚರಗೊಳ್ಳುತ್ತಿದೆ. ಚರಿತ್ರೆಯಲ್ಲಿ ಒಂದು ಮುಹೂರ್ತ ಬರುತ್ತದೆ, ಅತ್ಯಂತ ಅಪೂರ್ವವಾಗಿ ಬರುವ ಈ ಮುಹೂರ್ತದಲ್ಲಿ, ನಾವು ಗತಕಾಲದಿಂದ ಹೊಸಕಾಲಕ್ಕೆ ಹೆಜ್ಜೆಯಿಡುವ, ಒಂದು ಯುಗಮಾನವೇ ಕೊನೆಗೊಳ್ಳುವ, ಬಹುಕಾಲದಿಂದ ದಮನಕ್ಕೆ ಒಳಗಾದ ರಾಷ್ಟ್ರದ ಆತ್ಮವೊಂದು ತನ್ನನ್ನು ತಾನು ಅಭಿವ್ಯಕ್ತಗೊಳಿಸಿಕೊಳ್ಳುವ ಇಂಥ ಮಹತ್ವದ ಈ ಕ್ಷಣದಲ್ಲಿ, ಭಾರತದ ಹಾಗೂ ಭಾರತೀಯ ಜನತೆಯ ಸೇವೆಗೆ ಮತ್ತು ಇಡೀ ಮಾನವ

ಕೋಟಿಯ ಕಲ್ಯಾಣಕ್ಕೆ ಕಂಕಣಬದ್ಧರಾಗಿದ್ದೇವೆ ಎಂದು ನಾವು ಪ್ರತಿಜ್ಞೆ ಮಾಡುತ್ತೇವೆ.

**–ಜವಾಹರಲಾಲ್ ನೆಹರೂ**

ಪ್ರತಿಯೊಂದು ರಾಷ್ಟ್ರವೂ ನಿಜವಾದ ಅರ್ಥದಲ್ಲಿ ಒಂದು 'ಶಕ್ತಿ'- ಆಯಾರಾಷ್ಟ್ರದ ಜನತೆಯ ಅಂತಶ್ಚೇತನದಿಂದ ಮೂಡುವ ಹಾಗೂ ಮೂರ್ತಗೊಳ್ಳುವ ಮೂಲತತ್ವದಿಂದ ಜೀವಂತವಾದ ಒಂದು ಮಹಾಶಕ್ತಿ.

ಇಂಡಿಯವಾದ 'ಭಾರತ ಶಕ್ತಿ' ಮಹತ್ತಾದ ಆಧ್ಯಾತ್ಮಿಕ ಗ್ರಹಿಕೆಗೆ ಹಾಗೂ ತನ್ನ ಅಸ್ತಿತ್ವದ ಮೂಲಸೂತ್ರಕ್ಕೆ ನಿಷ್ಠವಾದ, ಒಂದು ಜೀವಂತ ಚೈತನ್ಯವಾಗಿದೆ. ಆದುದರಿಂದಲೇ ಅದು ಅನಾದಿಯಾದ ರಾಷ್ಟ್ರಗಳಲ್ಲಿ ಒಂದು; ಈ ಶಕ್ತಿಯೇ, ಅವರ ಆಶ್ಚರ್ಯಕರವಾದ ದೃಢತೆಯ ಹಾಗೂ ಅವರ ಅಸ್ತಿತ್ವದ ನಿರಂತರತೆಯ, ಮತ್ತು ಪುನರುಜ್ಜೀವನಸಾಮರ್ಥ್ಯದ ರಹಸ್ಯವಾಗಿದೆ.

**–ಮಹರ್ಷಿ ಅರವಿಂದರು**

ನನ್ನ ಮನೆಯ ಸುತ್ತಲೂ ಗೋಡೆಗಳನ್ನು ಕಟ್ಟಿಕೊಂಡು ಎಲ್ಲ ಕಡೆಯ ಕಿಟಕಿಗಳನ್ನೂ ಭದ್ರವಾಗಿ ಮುಚ್ಚಿಕೊಂಡು ಬದುಕುವುದು ನನಗೆ ಇಷ್ಟವಿಲ್ಲ. ಈ ನನ್ನ ಮನೆಯ ಮೇಲೆ ಜಗತ್ತಿನ ಎಲ್ಲ ದೇಶಗಳ ಸಂಸ್ಕೃತಿಯ ಗಾಳಿಗಳೂ ಧಾರಾಳವಾಗಿ

ಬೀಸಲಿ. ಆದರೆ ನಾನು ಮಾತ್ರ ನಿಂತ ನೆಲೆಯಿಂದ, ಈ ಯಾವುದರಿಂದಲೂ ವಿಚಲಿತನಾಗಲು ನಿರಾಕರಿಸುತ್ತೇನೆ.

**–ಮಹಾತ್ಮಾ ಗಾಂಧೀ**

ನಮ್ಮ ರಾಷ್ಟ್ರದ ನಿಜವಾದ ಗುರಿ ಏನಾಗಿರಬೇಕೆಂಬ ಬಗ್ಗೆ ನಾವು ಸ್ಪಷ್ಟವಾದ ತಿಳಿವಳಿಕೆಯುಳ್ಳವರಾಗಬೇಕು. ಎಲ್ಲಿ ಪ್ರತಿಯೊಬ್ಬ ನಾಗರಿಕನಿಗೂ ಬೆಳವಣಿಗೆಗೆ ಹಾಗೂ ಸೇವೆಗೆ ಸಮಾನವಾದ ಅವಕಾಶಗಳು ಲಭಿಸುತ್ತವೆಯೋ, ಎಲ್ಲಿ ಸಂಪತ್ತಿನ ಹಾಗೂ ಪದವಿಯ ತರತಮಗಳಿರುವುದಿಲ್ಲವೋ, ಎಲ್ಲಿ ನಮ್ಮೊಳಗೆ ಮಹತ್ವದ ಪ್ರವೃತ್ತಿಗಳು, ಸೃಜನಾತ್ಮಕ ಹಾಗೂ ಸಹಕಾರ ಮೂಲವಾದ ಸಾಹಸೋದ್ಯಮಗಳ ಕಡೆಗೆ ನಿರ್ದೇಶಿತ ವಾಗಿವೆಯೋ, ಅಂಥ ಬಲಿಷ್ಠವಾದ, ಸ್ವತಂತ್ರವಾದ, ಪ್ರಜಾ ಪ್ರಭುತ್ವಮೂಲವಾದ ಭಾರತವನ್ನು ನಿರ್ಮಾಣ ಮಾಡುವುದು ನಮ್ಮ ಗುರಿಯಾಗಿದೆ. ಅಂಥ ಭಾರತದಲ್ಲಿ ಜಾತೀಯತೆಗಾಗಲೀ, ಪ್ರತ್ಯೇಕತಾವಾದಗಳಿಗಾಗಲೀ, ವಿವಿಕ್ತತೆಗಾಗಲೀ, ಅಸ್ಪೃಶ್ಯತೆ ಗಾಗಲೀ, ಪರಮತ ದ್ವೇಷಕ್ಕಾಗಲಿ, ಶೋಷಣೆಗಾಗಲಿ ಅವಕಾಶ ವಿರುವುದಿಲ್ಲ. ಮತ್ತು ಅಲ್ಲಿ ಧರ್ಮವು ರಾಷ್ಟ್ರಜೀವನದ ರಾಜಕೀಯ ಹಾಗೂ ಆರ್ಥಿಕ ವ್ಯವಹಾರಗಳಿಂದ ಬೇರೆಯಾಗಿ ಸ್ವತಂತ್ರವಾಗಿ ವರ್ತಿಸುತ್ತದೆ. ಪರಿಸ್ಥಿತಿ ಹೀಗಿರುವುದಾದರೆ, ಹಿಂದೂ, ಮುಸ್ಲಿಂ, ಸಿಖ್, ಕ್ರೈಸ್ತ ಇತ್ಯಾದಿ ಭೇದ ಭಾವ ಮೂಲ ವಾದ ಗೊಂದಲಗಳು ಅಪ್ರಸ್ತುತವಾಗುತ್ತವೆ. ರಾಜಕೀಯವಾಗಿ ಎಲ್ಲಿ ವ್ಯಕ್ತಿಯ ಹಾಗೂ ರಾಷ್ಟ್ರದ ಸ್ವಾತಂತ್ರ್ಯವು ಸುರಕ್ಷಿತವಾಗಿರ ಬಲ್ಲದೋ ಅಂಥ ಸಂಯುಕ್ತವೂ ಸಮಗ್ರವೂ ಆದ ಭಾರತವನ್ನು ನಾವು ಕಟ್ಟಬೇಕಾಗಿದೆ.

**–ಜವಾಹರಲಾಲ್ ನೆಹರೂ**

ಎಲ್ಲಿ ಮನ ನಿರ್ಭಯದಿ ತಲೆ ಎತ್ತಿ ನಿಲ್ಲುವುದೊ
ಎಲ್ಲಿ ಜ್ಞಾನವು ಮುಕ್ತವಾಗಿರುವುದೋ
ಎಲ್ಲಿ ಈ ಲೋಕ ಸಂಕುಚಿತಮನೆಗೋಡೆ ಸುತ್ತುಗಳಿಂದ
ಚೂರುಚೂರಾಗಿ ಒಡೆದಿಲ್ಲವೋ
ಎಲ್ಲಿ ಮಾತುಗಳು ಸತ್ಯದಾಳದಿಂದಲೆ ಚಿಮ್ಮುವುವೋ,
ಎಲ್ಲಿ ದಣಿವರಿಯದನ್ವೇಷಣೆಯು ತನ್ನ ತೋಳುಗಳನ್ನು
ಪರಿಪೂರ್ಣತೆಯ ಕಡೆಗೆ ಚಾಚಿರುವುದೋ
ಎಲ್ಲಿ ವೈಚಾರಿಕತೆಯ ನಿರ್ಮಲ ಸಲಿಲ ತರಂಗಿಣಿಯು
ಅರ್ಥಹೀನ ಆಚಾರಗಳ ಶುಷ್ಕ ಮರುಭೂಮಿಯಲಿ
ದಾರಿ ತಪ್ಪಿಲ್ಲವೋ
ಎಲ್ಲಿ ನನ್ನ ಮನಸ್ಸು ನಿರಂತರವೂ ವಿಸ್ತಾರಗೊಳ್ಳುವ
ಮಾತು–ಕೃತಿಗಳ ಕಡೆಗೆ
ನಿನ್ನ ಮಾರ್ಗದರ್ಶನದಲ್ಲಿ ಮುನ್ನಡೆವುದೋ,
ಅಂಥ ಸ್ವಾತಂತ್ರ್ಯದ ಸ್ವರ್ಗಕ್ಕೆ ಓ ನನ್ನ ತಂದೆಯೆ
ಈ ನನ್ನ ನಾಡು ಎಚ್ಚರಗೊಳ್ಳಲಿ

–ರವೀಂದ್ರನಾಥ ಠಾಕೂರ್

# ಗ್ರಂಥ ಋಣ

ವೇದ, ಉಪನಿಷತ್, ಭಗವದ್ಗೀತೆ, ಬೈಬಲ್, ಕುರ್‌ಆನ್ ದಮ್ಮಪದ ಇತ್ಯಾದಿಗಳ ಜತೆಗೆ, ನಾವು ಈ ಸಂಕಲನದ ಅನೇಕ ಉಕ್ತಿಗಳಿಗಾಗಿ, ನೋಡಿದ ಕೆಲವು ಕೃತಿಗಳ ವಿವರ ಹೀಗಿದೆ:


Aurobindo: *The Foundation of Indian Culture,* 1968, Sri. Aurobindo Ashram, Pondicherry

Behary, Bankey(Ed.): *Sufis, Mystics and Yogies of India,* Bharatiya Vidya Bhavan, Bombay

Bose, Nirmal Kumar(Ed.): *Selections from Gandhi,* 1947, Navajivan Publications, Ahmedabad

Eaton, Richard Maxwell: *Sufis of Bijapur,* Princeton University Press, New Jersy, U.S.A.

Gandhi, M.K.: *Hind Swaraj,* Nateshan & Co., Madras

*India is One:* Sri Aurobindo Society, Pondicherry

*Jawahrarlal Nehru Speeches* Vols. I, II & III, Publications Division, New Delhi

Keer, Dhananjaya: *Dr. B.R.Ambedkar - Life and Mission,* 1971, Popular Prakashan, Bombay

Mohan Rao, U.S.(Ed.): *The Message of Mahatma Gandhi,* 1968, Publications Division, New Delhi

Nicholson, Reynold A. (Tr.): *Rumi: Poet and Mystic,* George Allen & Unwin Ltd. London

Normon, Dorothy (Ed.): *Nehru: The First Sixty Years Vol. II,* 1965, Asia Publishing House, Bombay

Parimoo, B.N.: *Lalleshwari,* 1987, National Book Trust, India, New Delhi

Radhakrishnan, S: *Occasional Speeches and Writings,* Publications Division, New Delhi

Ramakrishna, Lajwanti: *Punjabi Sufis,* Oxford University Press, London

Sashi, S.S. (Ed.): *Ambedkar and Social Justice,* 1992, Publications Division, New Delhi

Singh, Trilochan & Others (Tr.): *The Sacred Writings of Sikhs,* George Allen & Unwin, London

Soares, Anthony (Ed.): *Lectures and Addresses of Rabindranath Tagore,* 1952, Macmillan & Co., London

Tagore, Rabindranath: *Geethanjali,* Macmillan & Co. London

*Personality,* 1943, Macmillan & Co. London

ಕುವೆಂಪು, ಬೇಂದ್ರೆ, ಶಿವರಾಮ ಕಾರಂತ, ಮಾಸ್ತಿ, ಡಿ.ವಿ.ಜಿ., ಗೋಪಾಲಕೃಷ್ಣ ಅಡಿಗ, ಲೋಹಿಯಾ ಹಾಗೂ ಇನ್ನಿತರರ ಬರಹಗಳಿಂದ ಮತ್ತು ಪ್ರಾಚೀನ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತ ವಾಙ್ಮಯದಿಂದ.

Printed at Mayar Printers